# ಮುಂಜಾವು

ವಾರಪತ್ರಿಕೆ

ಸಂಪಾದಕ: ಶಿರಿಮನೆ ನಾಗರಾಜ್

ರಿಜಿಸ್ಟರ್ಡ್ ನಂ. ಕೆಆರ್‌ಎನ್‌ಎಸ್ — ೧೯

ಸಂಪುಟ ೧ ಸಂಚಿಕೆ ೧೬ ಕೊಪ್ಪ ೫-೧೨-೮೨ ಭಾನುವಾರ ಬೆಲೆ ೪೦ ಪೈಸೆ


ಲಯನ್ಸ್ ಆಶ್ರಯದಲ್ಲಿ ಉಚಿತ

## ನೇತ್ರ ಚಿಕಿತ್ಸೆ ಶಿಬಿರ

ಕೊಪ್ಪ: ಇಲ್ಲಿನ ಲಯನ್ಸ್ ಕ್ಲಬ್ ಆಶ್ರಯದಲ್ಲಿ ನ. ೨೮ರಂದು ಉಚಿತ ಕಣ್ಣು ಪರೀಕ್ಷೆ ಮತ್ತು ಚಿಕಿತ್ಸೆಯ ಕಾರ್ಯಕ್ರಮ ನಡೆಯಿತು. ಮಣಿಪಾಲದ ಕಸ್ತೂರಬಾ ಮೆಡಿಕಲ್ ಕಾಲೇಜಿನ ನೇತ್ರ ತಜ್ಞರ ತಂಡ ಕಾರ್ಯಕ್ರಮ ನಡೆಸಿಕೊಟ್ಟರು.

ಒಟ್ಟು ೨೫೦ ಜನ ರೋಗಿಗಳನ್ನು ಪರೀಕ್ಷೆ ಮಾಡಿ, ೨೫ ಜನರನ್ನು ಶಸ್ತ್ರ ಚಿಕಿತ್ಸೆಗಾಗಿ ಮಣಿಪಾಲಕ್ಕೆ ಕಳಿಸಿ ಕೊಡಲಾಯಿತು.

ಡಿಸಿಸಿ ಬ್ಯಾಂಕ್ ನೇಮಕದಲ್ಲಿ ಹೊಸಲಾತಿ ಸರಿಪಡಿಸುವ

## ಭರವಸೆ

ಚಿಕ್ಕಮಗಳೂರು: ಡಿ.ಸಿ.ಸಿ. ಬ್ಯಾಂಕಿನ ಇತ್ತೀಚಿನ ನೇಮಕಾತಿಗಳಲ್ಲಿ ಮೀಸಲಾತಿ ಉಲ್ಲಂಘನೆಯ ಮತ್ತು ವಯೋಮಿತಿ ಮೀರಿದ ಅಕ್ರಮಗಳು ಹಾಗೂ ಪರಿಶಿಷ್ಟ ಜನಾಂಗದವರಿಗೆ ಬಹಳ ಕಾಲದಿಂದ ಬಡ್ತಿ ನೀಡದ ಬಗ್ಗೆ ದಲಿತ ಸಂಘರ್ಷ ಸಮಿತಿ ಜಿಲ್ಲಾ ಶಾಖೆ ಪ್ರತಿಭಟಿಸಿತ್ತು. ಡಿ. ೨ರೊಳಗೆ ಸಕ್ರಮಗೊಳಿಸದಿದ್ದಲ್ಲಿ ಹೋರಾಟದ ಬೆದರಿಕೆ ಹಾಕಿತ್ತು.

ನ. ೧೫ರಂದು ಅಧ್ಯಕ್ಷರು ಸಮಿತಿಯ ನಿಯೋಗದೊಡನೆ ನಡೆಸಿದ ಚರ್ಚೆಯಲ್ಲಿ ತಪ್ಪುಗಳನ್ನು ಒಪ್ಪಿಕೊಂಡು ನವೆಂಬರ್ ಮತ್ತು ಡಿಸೆಂಬರ್ ಎರಡು ಹಂತಗಳಲ್ಲಿ ಸರಿಪಡಿಸುವ ಭರವಸೆ ನೀಡಿದ್ದಾರೆಂದು ಸಮಿತಿ ತಿಳಿಸಿದೆ.

# ಚುನಾವಣೆ: ಚಟುವಟಿಕೆ ಶುರು

ಶೃಂಗೇರಿ: ರಾಜ್ಯ ವಿಧಾನ ಸಭೆಗೆ ದಿಢೀರನೆ ಚುನಾವಣೆ ಘೋಷಣೆಯಾಗಿ ಒಂದು ವಾರ ಕಳೆಯುವುದರೊಳಗೆ ಕ್ಷೇತ್ರದಲ್ಲಿ ಚಟುವಟಿಕೆ ನಿಧಾನವಾಗಿ ಏರುತ್ತಿದೆ.

ಈ ಸಂಬಂಧ ಮೊದಲ ಸಭೆಯೇ ವಿರೋಧ ಪಕ್ಷಗಳದು. ನ. ೨೮ರಂದು ಕೊಪ್ಪದಲ್ಲಿ ಸೇರಿದ್ದ ವಿರೋಧ ಪಕ್ಷಗಳ ಪ್ರತಿನಿಧಿಗಳು ಹೆಚ್. ಜಿ. ಗೋವಿಂದಗೌಡರನ್ನು ತಮ್ಮ ಒಮ್ಮತದ ಅಭ್ಯರ್ಥಿಯಾಗಿ ಆರಿಸಿದ್ದಾರೆ. ಪುನಃ ಡಿ. ೪ರಂದು ವಿರೋಧಿ ಒಕ್ಕೂಟದ ಕಾರ್ಯಕರ್ತರ ಇನ್ನೊಂದು ಸಭೆ ನಡೆದು ಗ್ರಾಮಾಂತರ ಸಮಿತಿಗಳ ರಚನೆ ಶುರುವಾಗಿದೆ.

ನ.ರಾ.ಪುರ ತಾ॥ನಲ್ಲಿ ಜನತಾ ಮುಖಂಡ ಮಾಗ ಚಂದ್ರಶೇಖರ್, ಕ್ರಾಂತಿ ರಂಗದ ಕೃಷ್ಣಯ್ಯ ಆಗಲೇ ಚಟುವಟಿಕೆ ಪ್ರಾರಂಭಿಸಿರುವ ಸೂಚನೆ ಕಾಣುತ್ತಿದೆ. ಭಾಜಪಕ್ಕೆ ಚುನಾವಣೆಗಾಗಿ ವಿಶೇಷ ತಯಾರಿಯೇನೂ ಬೇಕಿಲ್ಲ.

ಶೃಂಗೇರಿ ತಾ॥ನಲ್ಲಿ ಜನತಾದ ಶ್ರೀಕಂಠಗೌಡ, ಕ್ರಾಂತಿರಂಗದ ಬಚ್ಚೋಡಿ ಶ್ರೀನಿವಾಸ್, ಸಿಪಿಎಂನ ವಿಠಲ ಹೆಗ್ಡೆ ತಮ ತಮ್ಮ ದಳಗಳನ್ನು ರಂಗಕ್ಕೆ ಸಜ್ಜುಗೊಳಿಸುತ್ತಿದ್ದಾರೆ: ಬಿಜೆಪಿ ಯಥಾ ಪ್ರಕಾರ.

### ಬೇಗಾನೆ ಸ್ಪರ್ಧೆ ಖಚಿತ

ಕಾಂಗ್ರೆಸ್ ಪಾಳಯ ಸಾಕಷ್ಟು ಚುರುಕಿನ ಕೆಲಸವನ್ನೇ ಶುರುಮಾಡಿದೆ. ಬೇಗಾನೆ ಸ್ಪರ್ಧೆ ಖಚಿತವೆಂದು ಗೊತ್ತಾಗಿದ್ದು ಕೊಪ್ಪದಲ್ಲಿ ನ.೩೦ರಂದು ಮಾಗ ಶ್ರೀನಿವಾಸ್ ಅಧ್ಯಕ್ಷತೆಯಲ್ಲಿ ನಡೆದ ಪಕ್ಷದ ಸಭೆಯಲ್ಲಿ ಬ್ಲಾಕ್ ಸಮಿತಿ, ಯುವ ಕಾಂಗ್ರೆ, ಕಿಸಾನ್ ಸೆಲ್‌ಗಳ ಪ್ರತಿನಿಧಿಗಳೆಲ್ಲ ಹುರುಪಿನಿಂದ ಭಾಗವಹಿಸಿ ಬೇಗಾನೆಯವರನ್ನು ಅತ್ಯಧಿಕ ಬಹುಮತದಿಂದ ಗೆಲ್ಲಿಸುವ ಪ್ರತಿಜ್ಞೆ ಮಾಡಿದ್ದಾರೆ. ಯುವ ಕಾಂಗ್ರೆ ಹೆಚ್.ಎಂ.ಶ್ರೀಧರ್ ಅಧ್ಯಕ್ಷತೆಯಲ್ಲಿ ಇನ್ನೊಂದು ಸಭೆಯಲ್ಲಿ ಹುರುಪಿನ ಚರ್ಚೆ ನಡೆಸಿ ಇದೇ ತೀರ್ಮಾನ ಕೈಗೊಂಡಿದ್ದಾಗಿ ಶ್ರೀಧರ್ ತಿಳಿಸಿದ್ದಾರೆ.

ಶೃಂಗೇರಿಯಲ್ಲಿ ಡಿ. ೭ರಂದು ಪಕ್ಷದ ಕಚೇರಿ ಪ್ರಾರಂಭ. ನ.ರಾ.ಪುರದ ಚಟುವಟಿಕೆಯ ಬಗ್ಗೆ ಹೆಚ್ಚಿನ ವರದಿಗಳು ಇನ್ನೂ ಬರಬೇಕಾಗಿದೆ.

(೭ನೇ ಪುಟಕ್ಕೆ)

ಹರಿಹರಪುರ ಕಿರಿಯ ಕಾಲೇಜು 'ಹಗರಣ':

## ಇಲಾಖೆ ಅಧಿಕಾರಿಯಿಂದ ವಿಚಾರಣೆ

**(ವರದಿ: ಮಾ. ಶೀ. ಗಣಪತಿ)**

ಹರಿಹರಪುರ: ಇಲ್ಲಿನ ಅಭಿನವ ರಾಮಾನಂದ ಕಿರಿಯ ಕಾಲೇಜಿನಲ್ಲಿ ಕೆಲವು ಕಾಲದಿಂದ ನಡೆಯುತ್ತಿದೆಯೆಂದು ಹೇಳಲಾಗಿರುವ ಹಗರಣ ನ. ೩೦ರಂದು ಶಿಕ್ಷಣ ಇಲಾಖೆಯಿಂದ ವಿಚಾರಣೆಗೆ ಒಳಪಟ್ಟಿತು.

ಈ ಸಂಸ್ಥೆ ೩ ವರ್ಷಗಳ ಹಿಂದೆ ಪ್ರೌಢ ಶಾಲೆಯಾಗಿದ್ದಾಗ ಮುಖ್ಯೋಪಾಧ್ಯಾಯರಾಗಿದ್ದವರ ಮೇಲೆ ಆಡಳಿತಸಮಿತಿ ಮಾಡಿರುವ ಆಪಾದನೆಗಳ ಬಗ್ಗೆ ವಿಚಾರಣೆ ನಡೆಸಲು ಜಿಲ್ಲಾ ವಿದ್ಯಾಧಿಕಾರಿ ವಾಸುದೇವ ಮಯ್ಯ ನಿಯುಕ್ತರಾಗಿ ಬಂದಿದ್ದರು. ಇದೇ ಸಂದರ್ಭದಲ್ಲಿ, "ಪೋಷಕರ ಕ್ರಿಯಾ ಸಮಿತಿ"ಯವರು ಆಡಳಿತ ವರ್ಗದವರ ಮೇಲೆ ಮಾಡಿದ್ದ ಆಪಾದನೆಗಳ ಬಗ್ಗೆ ಹೇಳಿಕೆ ಕೊಡಲು ಸಮಿತಿಯ ಪ್ರತಿನಿಧಿಗಳನ್ನೂ ಆಹ್ವಾನಿಸಲಾಗಿತ್ತು.

### "ವಿಚಾರಣೆ"?

ವಿಚಾರಣೆ ಅಷ್ಟೇನೂ ಹಿತಕರ ವಾತಾವರಣದಲ್ಲಿ ನಡೆಯಲಿಲ್ಲವೆಂದು ಗೊತ್ತಾಗಿದೆ. ಮುಖ್ಯೋಪಾಧ್ಯಾಯರಿಗೆ ಅವರ ಮೇಲಿನ ಆಪಾದನೆಗಳೇನು ಎಂಬುದನ್ನು ತಿಳಿಸಲಿಲ್ಲವೆನ್ನಲಾಗಿದೆ. ಈ ಬಗ್ಗೆ ಒತ್ತಾಯಿಸಿದಾಗ ಇದು ಪ್ರಾಥಮಿಕ ಹಂತದ ವಿಚಾರಣೆ ಮಾತ್ರ ಎಂದು ಅಧಿಕಾರಿ ಹೇಳಿದರೆನ್ನಲಾಗಿದೆ.

ವಿಚಾರಣೆಯಲ್ಲಿ, ತಾನು ಆಡಳಿತ ಸಮಿತಿಯ ಆಡಳಿತಾಧಿಕಾರಿ ಎಂದು ಪರಿಚಯಿಸಿಕೊಂಡು ಭಾಗವಹಿಸಿದ್ದ ಮಣಿಪಾಲ ಅಕಾಡೆಮಿಯ ಪ್ರತಿನಿಧಿ ಡಾ॥ ಶಾಂತಾರಾಂ ಎಂಬವರು, ಪೋಷಕರ ಸಮಿತಿಯ ಸದಸ್ಯರಾದ ಪತ್ರಕರ್ತ ಹೆಚ್.ಎಸ್.ಸೀತಾರಾಮಯ್ಯನವರಿಗೆ ಒಂದು ಸಂದರ್ಭದಲ್ಲಿ "ಬಾಯಿ ಮುಚ್ಚು" ಎಂದು ಜೋರುಹಾಕಿದ್ದನ್ನು ಸೇರಿದ್ದವರೆಲ್ಲರೂ ತೀವ್ರವಾಗಿ ಪ್ರತಿಭಟಿಸಿದಾಗ ಅವರು ನೇರವಾಗಿ ಕ್ಷಮೆ ಯಾಚಿಸಿದರೆಂದು ತಿಳಿದು ಬಂದಿದೆ.

(೬ನೇ ಪುಟಕ್ಕೆ)

## ಕಲ್ಕೆರೆಯಲ್ಲಿ ಕೊಪ್ಪ ತಾ॥ ಯುವಜನ ಮೇಳ

ಕಲ್ಕೆರೆ: ಇಲ್ಲಿನ ಪ್ರಾಥಮಿಕ ಶಾಲಾ ಆವರಣದಲ್ಲಿ ಡಿ. ೪ ಮತ್ತು ೫ ರಂದು ತಾ॥ಅ॥ಮಂಡಳಿ, ತೆಂಗಿನಮನೆ ಯುವಕ ಸಂಘ ಹಾಗೂ ಜಿಲ್ಲಾ ಯುವಜನ ಸೇವಾ ಇಲಾಖೆಯ ಸಂಯುಕ್ತ ಆಶ್ರಯದಲ್ಲಿ ತಾಲ್ಲೂಕು ಯುವಜನ ಮೇಳ ನಡೆಯಿತು. ಇದರ ಸಮಾರೋಪ ಸಮಾರಂಭವು ಡಿ. ೫ ರಂದು ಮಾಗ ಶ್ರೀನಿವಾಸ್‌ರ ಅಧ್ಯಕ್ಷತೆಯಲ್ಲಿ ನಡೆಯಿತು. ಕಾರ್ಯಕ್ರಮದಲ್ಲಿ ಜಯಪುರ ಗ್ರಾಮಪಂಚಾಯ್ತಿ ಅಧ್ಯಕ್ಷ ನಜ್ರಪ್ಪ, ಎಸ್. ಎಸ್. ನಾಗೇಂದ್ರಭಟ್ಟ, ತಾ॥ಯುವಜನ ಒಕ್ಕೂಟದ ಹೆಚ್. ಎಂ. ಶ್ರೀಧರ್ ಹಾಗೂ ಸಹಾಯಕ ಕೃಷಿ ನಿರ್ದೇಶಕ ಎಂ. ಎಸ್. ಸುಬ್ಬೇಗೌಡರು ಮಾತನಾಡಿದರು. ತುಳುವಿನಕೊಪ್ಪ ಗ್ರಾಮ ಪಂಚಾಯ್ತಿ ಅಧ್ಯಕ್ಷ ಯು. ವಿ. ಶ್ರೀನಿವಾಸರಾವ್ ಸ್ಪರ್ಧೆಗಳಲ್ಲಿ ಗೆದ್ದ ಯುವಕ ಯುವತಿಯರಿಗೆ ಬಹುಮಾನ ವಿತರಿಸಿದರು.

### ಸೀಮೆಎಣ್ಣೆ ಕ್ಷಾಮ: ಚಿಮಣಿಗೆ ಡೀಸೆಲ್ ಬಳಕೆ!

ಹಾಲ್ಮುತ್ತೂರು: ಸೀಮೆಎಣ್ಣೆಗೆ ಪುನಃ ಕ್ಷಾಮ ಬಂದಿದ್ದು, ಈ ಸುತ್ತ ಮುತ್ತ ಕೆಲವು ಕಡೆಗಳಲ್ಲಿ ಚಿಮಣಿ ದೀಪಕ್ಕೆ ಸೀಮೆಎಣ್ಣೆ ಇಲ್ಲದೆ ಡೀಸೆಲ್ ಬಳಸುತ್ತಿರುವುದು ಕಂಡು ಬಂದಿದೆ. ಡೀಸೆಲ್ ಬಳಸಿದರೆ ಖರ್ಚು ಒಂದಕ್ಕೆ ಮೂರರಷ್ಟಾಗುತ್ತಿನ್ನಲಾಗಿದೆ. ಈಗ ಬಳಕೆ ಅಡಿಕೆ ಕುಯ್ಲು ಬೇರೆ!

ಬ್ಯಾಂಕರ್ಸ್ ರಿಕ್ರಿಯೇಶನ್ ಕ್ಲಬ್ ವಾರ್ಷಿಕೋತ್ಸವ:

## ಜನ-ಮನ ರಂಜಿಸಿದ ಸುಂದರ ಸಂಜೆ

ಕೊಪ್ಪ: ಇಲ್ಲಿನ ಬ್ಯಾಂಕರ್ಸ್ ರಿಕ್ರಿಯೇಶನ್ ಕ್ಲಬ್‌ನ ಚೊಚ್ಚಲ ವಾರ್ಷಿಕೋತ್ಸವದ ಅಂಗವಾಗಿ ನ.೫ರಂದು ಸಂಜೆ ನಡೆದ ಕಾರ್ಯಕ್ರಮ ಹಿತಮಿತವಾಗಿದ್ದು, ಅಪಾರ ಸಂಖ್ಯೆಯಲ್ಲಿ ಸೇರಿದ್ದ ಮನರಂಜನಾ ಪ್ರೇಮಿಗಳಿಗೆ ಉತ್ತಮ ಕಾಲಕ್ಷೇಪ ಒದಗಿಸಿತು.

ಸಿಂಡಿಕೇಟ್ ಬ್ಯಾಂಕ್ ಮ್ಯಾನೇಜರ್ ಟಿ.ಎ. ನಾಯಕರ ಅಧ್ಯಕ್ಷತೆಯಲ್ಲಿ ನಡೆದ ಕಾರ್ಯಕ್ರಮಗಳಲ್ಲಿ ಹೆಚ್.ಜಿ.ಗೋವಿಂದಗೌಡರು ಮುಖ್ಯ ಅತಿಥಿಗಳಾಗಿದ್ದು, ಕಿರಿಯ ಕಾಲೇಜು ಪ್ರಾಂಶುಪಾಲ ಕೆ.ಎಸ್. ನಾರಾಯಣ ಸ್ವಾಮಿ ಬಹುಮಾನ ವಿತರಣೆ ಮಾಡಿದರು.

ಉಮಾಶಂಕರ ಮೂರ್ತಿ ಪ್ರಾರ್ಥಿಸಿದರು. ಹೆಚ್. ಎಸ್. ಮಂಜುನಾಥ ಸ್ವಾಗತಿಸಿ ಎಸ್. ಎ. ವಸಂತ್ ವಂದಿಸಿದರು. ಕುಮಾರಿಯರಾದ ವಿಜಯಾ, ಶೈಲಾ, ಗಾಯಿತ್ರಿಯರ ವಿವಿಧ ರೀತಿಯ ಹಾಡುಗಳು ಕಾರ್ಯಕ್ರಮದ ಮುಖ್ಯ ಆಕರ್ಷಣೆಯಾಗಿತ್ತು.

ಅನಂತರ ಕೋಲಾಟ ವಾದನ, ಹಾಡುಗಳು, ವೃಂದಗಾನ, 'ಆಕ್ರೋಶ' ಎಂಬ ಏಕಾಂಕ ನಾಟಕ, 'ನಮ್ಮಯಜಮಾನ್ರು' ಎಂಬ ನಾಟಕ ಮುಂತಾದವನ್ನೊಳಗೊಂಡ ಮನರಂಜನಾ ಕಾರ್ಯಕ್ರಮ ಪ್ರೇಕ್ಷಕ-ಶ್ರೋತೃಗಳನ್ನು ರಂಜಿಸಿತು.

### ಸೂಚನೆ

೩ನೇ ಪುಟದಲ್ಲಿ "ಶೃಂಗೇರಿ: ಶ್ರೀ ಸಂ...." ಎಂಬ ವರದಿಯಿದೆ. ಈ ವರದಿ ಪ್ರಕಟವಾಗುವ ಹೊತ್ತಿಗೆ ಇಲ್ಲಿನ ವನಿತಾ ಸೇವಾ ಸಮಾಜದ ಅಧ್ಯಕ್ಷೆ ಶ್ರೀಮತಿ ಭಾರತಿ ಹಾಗೂ ಕಾರ್ಯದರ್ಶಿ ಶ್ರೀಮತಿ ಸೌಭಾಗ್ಯ ಅವರುಗಳು, ಸಮಾಜದ ಕಾರ್ಯವಿಧಾನ, ನಿಯಮಾವಳಿ ಕುರಿತು ಒಂದು ಹೇಳಿಕೆ ಕಳಿಸಿ, ಸಮಾಜದ ವತಿಯಿಂದ ಯಾವುದೇ ಅನ್ಯಾಚಾರ ನಡೆದಿಲ್ಲ ಎಂದು ತಿಳಿಸಿದ್ದಾರೆ. ಅವರ ಹೇಳಿಕೆಯ ಪೂರ್ಣ ವಿವರ ಮುಂದಿನ ಸಂಚಿಕೆಯಲ್ಲಿ. —ಸಂ.


ತಾ. 10-12-82ರ ಶುಕ್ರವಾರ ಮಧ್ಯಾಹ್ನ 2 ಗಂಟೆಗೆ

ಬೇಳೆಗದ್ದೆಯ ನಮ್ಮ ಮನೆಯಲ್ಲಿ

## ಸಮಾನ ಮನಸ್ಕರ ಸಮಾವೇಶ

ಏರ್ಪಡಿಸಿರುತ್ತೇ.

ಎಲ್ಲಾ ಅಭಿಮಾನಿಗಳು, ಸ್ನೇಹಿತರು ಈ ಪ್ರಕಟಣೆಯನ್ನೇ ಆಹ್ವಾನವೆಂದು ತಿಳಿದು ಈ ಸಭೆಯಲ್ಲಿ ಭಾಗವಹಿಸಿ ಮುಂದಿನ ರಾಜಕೀಯ ನಿಲುವಿನ ಬಗ್ಗೆ ತೀರ್ಮಾನ ಕೈಗೊಳ್ಳಲು ಸಲಹೆ-ಸಹಕಾರ ನೀಡಬೇಕೆಂದು ಕೋರುತ್ತೇನೆ.

ಬೇಳೆಗದ್ದೆ ಚಂದ್ರಶೇಖರ್.

## ಸೀಮೆಎಣ್ಣೆ: "ಬಳಸುವವರ ಘನತೆ ಉಳಿಸಿ"

ಮಾನ್ಯರೆ,

ಬಹಳಷ್ಟು ಕಡೆಗಳಲ್ಲಿ ಇರಬಹುದಾದಂತೆ ಕೊಪ್ಪದಲ್ಲೂ ಸೀಮೆಎಣ್ಣೆ ಅಭಾವ ಇದೆ. ಆದರೆ ಕೊಪ್ಪದಲ್ಲಿ ಈ ಅಭಾವ ಕೇವಲ ಕೃತಕವಿರಬಹುದು ಎಂದು ಕಾಣುತ್ತಿದೆ.

ಊರಿಗೆ ಬಂದ ಸೀಮೆಎಣ್ಣೆ ವಿತರಣೆಯು ವ್ಯವಸ್ಥೆ ತಹಸೀಲ್‌ದಾರರಿಗೆ ಸೇರಿದ್ದು ಎಂದು ಕೇಳಿದ್ದೇನೆ. ಆದ್ದರಿಂದ ಸೀಮೆಎಣ್ಣೆ ಬಂದಾಗ ಯಾವ ಆಧಾರದ ಮೇಲೆ ಅದನ್ನು ಬಳಕೆದಾರರಿಗೆ ಪೂರೈಸಲಾಗುತ್ತಿದೆ ಎಂಬುದಕ್ಕೆ ಅವರೇ ವಿವರಣೆ ನೀಡಬೇಕು.

ಈಗ ರೂಢಿಯಂತೆ ಕೆಲವು ಸೊಸೈಟಿಗಳಲ್ಲೂ, ಮತ್ತೆ ಕೆಲವು ಅಂಗಡಿಗಳಲ್ಲೂ ಸೀಮೆಎಣ್ಣೆ ದೊರೆಯುತ್ತಿದೆ. ಆದರೆ ಇದಕ್ಕೆ ಕಾರ್ಡ್ ಅಗತ್ಯವಿಲ್ಲ. ಇದರಿಂದ ಕೆಲವರಿಗೆ ಹೆಚ್ಚು, ಕೆಲವರಿಗೆ ಕಡಿಮೆ ಸಿಗುವ ಹಾಗೆ ಆಗುತ್ತಿದೆ.

ಹಣಕೊಟ್ಟು ಎಣ್ಣೆ ಕೊಳ್ಳುವ ಬಳಕೆದಾರನಿಗೆ ನ್ಯಾಯಬದ್ಧ ಪ್ರಮಾಣದಲ್ಲಿ, ಸರಿಯಾದ ಮಾರ್ಗದಲ್ಲಿ ಎಣ್ಣೆ ಪೂರೈಸುವುದು ಪೂರೈಕೆದಾರರ ಜವಾಬ್ದಾರಿ. ನಮ್ಮ ತಹಸೀಲ್ದಾರರು ಈ ಬಗ್ಗೆ ಕೂಡಲೇ ಕ್ರಮ ತೆಗೆದುಕೊಳ್ಳಬೇಕು.

—ಎಚ್. ಸುಂದರ ರಾವ್, ಕೊಪ್ಪ.

### ಓದುಗರ ಪತ್ರಗಳು

## ಕಾಡುವ ಅನುಮಾನಗಳು....

ಮಾನ್ಯರೆ,

ದಿನಾಂಕ ೨೧-೧೧-೮೨ರ ನಿಮ್ಮ ಪತ್ರಿಕೆಯಲ್ಲಿ ಪ್ರಕಟವಾದ ನರಸಿಂಹರಾಜಪುರದ ಪ್ರಕರಣ ಕುರಿತ ವರದಿ ನಿಜವಾಗಿಯೂ ಉನ್ನತ ಮಟ್ಟದ್ದಾಗಿದ್ದು ಪತ್ರಿಕೋದ್ಯಮದ ಉತ್ಕೃಷ್ಟತೆಗೆ ಸಾಕ್ಷಿಯಾಗಿದೆ.

ಎರಡು ವ್ಯಕ್ತಿಗಳ ನಡುವೆ ಇರುವ ಅಥವಾ ನಡೆದ ಸಂಘರ್ಷಗಳ ಸಂದರ್ಭದಲ್ಲಿ ಎರಡೂ ಪಕ್ಷಗಳ ವ್ಯಕ್ತಿಗಳು ತಮ್ಮ ತಮ್ಮ ವಾದವನ್ನು ಸಮರ್ಥಿಸಿಕೊಳ್ಳುವುದು ಸಹಜ. ಆದ್ದರಿಂದ ವಿಚಾರ ವಿಶ್ಲೇಷಿಸುವಾಗ ಪೂರ್ವಾಗ್ರಹದ ಪೀಡೆ ಮೊದಲು ಎಲ್ಲರಲ್ಲೂ ದೂರವಾಗಬೇಕಾಗಿದೆ. ಡಾ॥ ನಾಗರಾಜ್‌ರವರ ಹೇಳಿಕೆ ಸಂಪೂರ್ಣವಾಗಿ ಓದಿದಾಗ, ಅವರು ಕೇವಲ ಸಾರ್ವಜನಿಕರ ಅನುಕಂಪ ಗಳಿಸಿಕೊಳ್ಳಲು ಹಲವು ಬಾರಿ ಅತಿರಂಜಿತ ಪ್ರಕರಣವನ್ನಾಗಿಸಿದ್ದಾರೆಯೇ ಎಂಬ ಅನುಮಾನ ಮೂಡುತ್ತದೆ.

ಅಧಿಕಾರಿಯೊಬ್ಬ ಕಾರ್ಯನಿರ್ವಹಿಸುವಾಗ ವಿಪರೀತ ತೊಂದರೆಗೆ ಒಳಗಾಗುತ್ತಾನೆಂಬುದು ಈ ಪ್ರಕರಣದಿಂದ ಬೆಳಕಿಗೆ ಬಂದಂತಾಗಿದೆ. ಯಾವುದೇ ವ್ಯಕ್ತಿ ಎಷ್ಟೇ ದೊಡ್ಡವನಾಗಿದ್ದರೂ ಕಾನೂನಿನ ದೃಷ್ಟಿಯಲ್ಲಿ ಎಲ್ಲರೂ ಸಮಾನರು. ವಿದ್ಯಾವಂತರೆನಿಸಿಕೊಂಡ ಮಂದಿ ತಾವು ಅನ್ಯರಲ್ಲಿ ನಡೆದುಕೊಳ್ಳಬೇಕಾದ ಮೂಲಭೂತ ವಿಚಾರಗಳ ಅರಿವೇ ಇಲ್ಲದೇ ನಡೆಯುವರೇನೋ ಎಂಬ ಅನುಮಾನವೂ ಸಹ ಹಲವೊಮ್ಮೆ ಮೂಡುತ್ತದೆ. ಸರ್ಕಾರೀ ನೌಕರನಾದವನು ಎಲ್ಲರಿಗೂ ಒಳಿತನ್ನೇ ಮಾಡುವುದು ಸಾಧ್ಯವಿಲ್ಲ. ನ್ಯಾಯವಿದ್ದಂತೆ ಅವನು ವರ್ತಿಸುವುದು ಅನಿವಾರ್ಯ ಹಾಗೂ ಅಗತ್ಯ. ಹಣ—ಪ್ರಭಾವ—ರಾಜಕೀಯ ಆಮಿಷಗಳಿಗೆ ಹೆದರುವ ಕಾರಣವಿಲ್ಲ. ಆ ಒತ್ತಡಗಳಿಂದಾಗಿ ನೌಕರ ನೋವುಂಡರೂ, ಸಮಾಜಕ್ಕೆ ಅವನು ಸಲ್ಲಿಸುವ ಸೇವೆ ಹತ್ತಾರು ಜನರ ಮನದಲ್ಲಿ ಲನೆಗೊಂಡು ಆತನಿಗೆ ಒಳ್ಳೆಯದಾಗಲೆಂದು ಅವರು ಹಾರೈಸುವುದಂತೂ ಸತ್ಯ.

ನಿಮ್ಮ ವರದಿಯಲ್ಲಿ ಈ ಕೆಳಕಂಡ ಸಾಲುಗಳಿವೆ—"ಅಷ್ಟು ಉನ್ನತ ಮಟ್ಟದ ವಿದ್ಯಾವಂತನನ್ನು ರಸ್ತೆಯಲ್ಲಿ ಸಾರ್ವಜನಿಕವಾಗಿ ಹೊತ್ತುಕೊಂಡು ಹೋದದ್ದು ...." ಹಾಗೂ" ....ಆದರೆ ಮರ್ಯಾದಸ್ಥರನ್ನೆಲ್ಲಾ ಹೀಗೆ ಮುಖನೋಡಿ ನೋಡದೇ ಥಳಿಸುವುದನ್ನು ನಾನು ಒಪ್ಪುವುದಿಲ್ಲ...." ಇತ್ಯಾದಿ. ಈ ವಿಚಾರವಂತಿಕೆಯ ಎಳೆಯನ್ನು ವಿಶ್ಲೇಷಿಸಿದಾಗ, ಅವಿದ್ಯಾವಂತನಿಗೆ ಏನಾದರೂ ಮಾಡಿಕೊಳ್ಳಲಿ, ವಿದ್ಯಾವಂತರಿಗೆ ಮಾತ್ರವೇ ಹಾಗೆ ಮಾಡಿದ್ದು ಭಾರೀ ಅಪರಾಧ ಎನ್ನುವುದು ಆ ಅಭಿಪ್ರಾಯ ಸೂಚಿಸಿದವರ ನಿಲುವೇ ಎಂಬ ಅನುಮಾನ ಮೂಡುತ್ತದೆ. ಅದು ಅವರುಗಳ ನಿಲುವಾಗಿದ್ದರೆ ಎಷ್ಟರ ಮಟ್ಟಿಗೆ ಅದು ಸಮರ್ಥನೀಯ?

ಪುರಸಭಾಧ್ಯಕ್ಷರು ಪೋಲೀಸರಿಗೆ ಹೊಡೆಯುವುದನ್ನು ಬಿಟ್ಟರೆ ಬೇರೆ ಕೆಲಸವೇ ಇಲ್ಲವೆಂದು ಹೇಳಿದ ವರದಿಯಿದೆ. ಇದು ಪೂರ್ವಾಗ್ರಹದ ಚಿಂತನೆ ಎನ್ನಬಹುದೇ?

'ಮರ್ಯಾದಸ್ಥ'ರ ಪರವಾಗಿ ಹೇಳಿರುವ ಜನರೆಲ್ಲರೂ ವಿದ್ಯಾವಂತರೇ, ಚಿಂತನಶೀಲರೇ! ಆದರೆ, ಶ್ರೀಸಾಮಾನ್ಯರು ಮಾತ್ರ ಅವರುಗಳ ಹೇಳಿಕೆಗೆ ವಿರುದ್ಧವಾದ ಅಭಿಪ್ರಾಯ ಸೂಚಿಸಿರುವುದು ಒಂದು ರೀತಿಯ ವಿಚಿತ್ರ ಅನುಮಾನಕ್ಕೆ ಎಡೆಕೊಡುತ್ತದೆ. ಒಬ್ಬ ಸಾಮಾನ್ಯ ಮನುಷ್ಯ ಕಾಣಲಾಗದ ಹಿಂಸೆ ಹಾಗೂ ಕ್ರೌರ್ಯ ಬೇರೆಯವರಿಗೆ ಕಂಡದ್ದಾದರೂ ಹೇಗೆ ಎಂಬ ಚಿಂತೆ ಕಾಡುತ್ತದೆ.

ಮುಷ್ಕರಕ್ಕಾಗಿ ಶಾಲಾ ಮಕ್ಕಳನ್ನು ಎಳೆದದ್ದಂತೂ ತೀರ ಹೇಯ ಸಂಗತಿ. ಈ ದಿಸೆಯಲ್ಲಿ ಸಹಾಯಕ ಶಿಕ್ಷಣಾಧಿಕಾರಿಗಳು ಹೇಗೆ ಸಮ್ಮತಿಸಿದರು ಅಥವಾ ಸಮ್ಮತಿಯಿಲ್ಲದಿದ್ದರೆ ಸುಮ್ಮನಿದ್ದುದು ಹೇಗೆ ಎಂಬುದು ತುಂಬಾ ಅಚ್ಚರಿಯ ಸಂಗತಿ. ಭಾರತದ ಭಾವೀ ಪ್ರಜೆಗಳನ್ನು ಇಂತಹ ಕೃತ್ಯಗಳಿಗಾಗಿ ಬಳಸಿಕೊಳ್ಳುವ ಹಕ್ಕು ಯಾವುದೇ ಸಭ್ಯ ನಾಗರಿಕನಿಗೂ ಇಲ್ಲ.

ಎಲ್ಲ ಕಡೆಯೂ ಅಷ್ಟೆ, ತನ್ನ ಮೂಗಿನ ನೇರಕ್ಕೆ ನಡೆಯದ, ತಾನು ಹೇಳಿದ್ದನ್ನು ಒಪ್ಪದ ನೌಕರರ ವಿರುದ್ಧ ಹಲವಾರು ಮಂದಿ ಪ್ರಭಾವೀ ವ್ಯಕ್ತಿಗಳು ಸಮರ ಸಾರುವುದು; ಸಾರುತ್ತಿರುವದು ಸತ್ಯವಾದ ಸಂಗತಿ.

ಬಹುಮಂದಿಗೆ ಒಳಿತಾಗುವಾಗ ಕೆಲ ಮಂದಿಗೆ (ಅವರ ತಪ್ಪಿದ್ದಲ್ಲಿ) ಕೆಡಕಾಗುವುದು ಸಹಜ. ಆದರೆ ಕೆಲಮಂದಿಗೆ (ಅವರ ತಪ್ಪಿದ್ದರೂ) ಒಳಿತು ಮಾಡುವಾಗ ಬಹುಮಂದಿಗೆ ಕೆಡಕಾಗುವುದೂ ಖಚಿತ. ಇದು ರಾಷ್ಟ್ರದ ಹಲವಾರು ಸ್ತರಗಳಲ್ಲಿ ಅನೂಚಾನವಾಗಿ ಸಾಗಿಬಂದಿರುವ ವ್ಯವಸ್ಥೆಯ ಪ್ರತ್ಯಕ್ಷರೂಪ!

—ಪರಿವೀಕ್ಷಕ, ನ.ರಾ.ಪುರ.

## ನಾಲ್ಕು ಸ್ಪಷ್ಟೀಕರಣಗಳು

-(೧)-

ದಿನಾಂಕ ೧೪-೧೧-೮೨ರ 'ಮುಂಜಾವು' ಪತ್ರಿಕೆಯಲ್ಲಿ ಓದುಗರ ಪತ್ರಗಳ ವಿಭಾಗದಲ್ಲಿ 'ಕಾವಿ' (ಕಾಲೇಜು ವಿದ್ಯಾರ್ಥಿಗಳು), ಕಿರಿಯ ಕಾಲೇಜು, ಕೊಪ್ಪ, ಇವರುಗಳ ಹೇಳಿಕೆಗೆ ಹೊಸದಾಗಿ ಉಪನ್ಯಾಸಕರಾಗಿ ಬಂದ ನಾವು ಸ್ಪಷ್ಟನೆ ನೀಡಲು ಬಯಸುತ್ತೇವೆ.

"ಸರಿಯಾಗಿ ಪಾಠ ಮಾಡುವುದಕ್ಕೆ ಬರುತ್ತೋ ಇಲ್ಲವೋ—ಅಂತೂ ಉಪನ್ಯಾಸಕರನ್ನು ನಾವು ಪಡೆದಿದ್ದೇವೆ" ಎಂಬ ಹೇಳಿಕೆ ಅವರ ದೌರ್ಬಲ್ಯದ ಪರಮಾವಧಿಯನ್ನು ಅವರೇ ಒಪ್ಪಿಕೊಳ್ಳುತ್ತಾರೆ ಎನ್ನುವುದಕ್ಕೆ ಸ್ಪಷ್ಟ ನಿದರ್ಶನ.

ಸುಪ್ತಶಕ್ತಿಯ ಆವಿಷ್ಕಾರ ಮಾಡಿಕೊಂಡು ತಮ್ಮ ಜೀವನಕ್ಕೆ ಗುರಿಯೊಂದನ್ನು ಕಾಣಬಯಸುವ 'ಕಾವಿ'ಗಳು ಆ ಗುರಿಯನ್ನು ಎಂದಿಗೂ ಮರೆಯ ಬಾರದಷ್ಟೆ? ವರ್ಗದ ಕೋಣೆಯಲ್ಲಿ 'ಕಾವಿ'ಗಳ ತಾಟಸ್ಥ್ಯ ಧೋರಣೆ ಶಿಕ್ಷಣದ ಮೇಲಿನ ಅವರ ತಾತ್ಸಾರವನ್ನು ವ್ಯಕ್ತಪಡಿಸುತ್ತದೆ. ನಾವು ವಿದ್ಯಾಲಯಕ್ಕೆ ಬಂದು ನಾಲ್ಕು ತಿಂಗಳು ಗತಿಸಿದರೂ ಕೂಡ ಯಾವೊಬ್ಬ ಕಾವಿ-ಯೂ ಉಪನ್ಯಾಸಕರನ್ನು, "ವಿಷಯ ತಿಳಿಯಲಿಲ್ಲ, ಮತ್ತೊಮ್ಮೆ ತಿಳಿಸಿ" ಎಂದು ಕೇಳುವ ಸಾಹಸಕ್ಕೆ ಪ್ರಯತ್ನಿಸದಿರುವುದು ದುರದೃಷ್ಟಕರ.

"ಕುಣಿಯಲಾರದವಳು ನೆಲಡೊಂಕು" ಎನ್ನುವಂತೆ ಕಾವಿಗಳು ತಮ್ಮ ಅಸಾಮರ್ಥ್ಯವನ್ನು ಹೇಳಿಕೊಳ್ಳಲು ನಾಚಿ ಉಪನ್ಯಾಸಕರನ್ನು ದೂರಿದ್ದಾರೆ. ಇದು ನಮ್ಮ ಮತ್ತು 'ಕಾವಿ'ಗಳ ಸುಮಧುರ ಬಾಂಧವ್ಯ

(೬ನೇ ಪುಟಕ್ಕೆ)

## ಅಲ್ಲವಾದರಲ್ಲವೆನ್ನಿ!

(೨ನೇ ಪುಟದಿಂದ)

ತೆ. ಈ ಮನುಷ್ಯ ಕಾನೂನನ್ನು ನಮಗೂ, ಥರ್ಡ್ ಕ್ಲಾಸ್ ಜನಗಳಿಗೂ ಒಂದೇ ರೀತಿ ಅನ್ವಯಿಸುತ್ತಾನೆ; ಇವನನ್ನು ಇಲ್ಲಿ ಇರಗೊಟ್ಟರೆ ನಮ್ಮ ವ್ಯವಹಾರಗಳಿಗೆ ಧಕ್ಕೆ ಅಂತ ಹಲವು ಜನ ಬಹಳ ದಿನದಿಂದ ಅವರ ವರ್ಗಕ್ಕೆ ಅಧಿಕಾರಿ ಮತ್ತು ರಾಜಕೀಯ ನಲುಮೆಯ ಉನ್ನತ ಮಟ್ಟದವರೆಗೆ ಪ್ರಯತ್ನಿಸಿದ್ದರಂತೆ. ಜನತಾ ಮುಖಂಡ ಈಗಿನ ಚಂದ್ರಶೇಖರ್ ರವರಾಗಲೀ ಕಾಂಗ್ರೆ ಮುಖಂಡರುಗಳಾಗಲಿ ಇದಕ್ಕೆ ಬೆಂಬಲ ಕೊಡದೆ, ಬೇಗಾನೆಯವರೂ ಇದರಲ್ಲಿ ತಲೆ ಹಾಕಲು ಇಷ್ಟಪಟ್ಟಿರಲಿಲ್ಲವಂತೆ (ಸ್ವತಃ ಅವರೇ ಲಕ್ಷ್ಮಣ್ ಕೆಲಸ ಮೆಚ್ಚಿದ್ದರಂತೆ.)

ಆದರೆ ಡಾ|. ನಾಗರಾಜರ ಪ್ರಕರಣ ಬೀದಿಗೆ ಬಂದು ಸಾರ್ವಜನಿಕವಾದಾಗ ಈ 'ಜನ್ನಲೆ ಮಂದಿ'ಗೆ ಒಳ್ಳೆ ಹಿಡಿತ ಸಿಕ್ಕಿತಂತೆ ಹಿರಿಯ ಅಧಿಕಾರಿಗಳು ತೀವ್ರ ಕ್ರಮ ತೆಗೆದುಕೊಳ್ಳದೆ ಹೋದಾಗ ವಿಧಾನ ಸೌಧದ ವರೆಗೆ ಹೋಗಿ ಅವಮಾನತಿನ ಅಜ್ಞೆ ಬರಿಸಿದರಂತೆ. ಈಗ ಚಂದ್ರಶೇಖರ್ ಹಾಗಿರಲಿ, ಲಕ್ಷ್ಮಣರ ವರ್ಗಾವಣೆಯನ್ನು ಕಡೆ ತನಕ ವಿರೋಧಿಸಿದ್ದ ಅಬ್ಬಾಸ್ ಸಮದ್, ಹೆಚ್.ಪಿ. ತಿಮ್ಮಯ್ಯ ಗೌಡರಂಥವರೂ ಸಹ ಬೆಂಗಳೂರಿಗೆ ಹೋಗಿದ್ದ ಈ 'ನಿಯೋಗ'ದಲ್ಲಿದ್ದರಂತೆ! ಊರಿನ 'ಮರ್ಯಾದಸ್ಥರು' ತಮ್ಮ 'ಅಂತಸ್ತು' ಶಾಶ್ವತವಾಗಿ ಉಳಿಸಿಕೊಳ್ಳಲು ಇವರೂ ಸೇರಪಾದರಂತೆ. (ಶಾಶ್ವತವಾಗಿ ಏಕೆಂದರೆ ಮುಂದೆ ಬರುವ ಯಾವ ಠಾಣಾಧಿಕಾರಿಯೂ ಈ ರೀತಿ 'ತಪ್ಪು' ಮಾಡುವ ಎದೆಗಾರಿಕೆ ತೋರಿಸಲಿಕ್ಕಿಲ್ಲ. ಅಂದ ಮೇಲೆ 'ಅಂತಸ್ತಿ'ಗೇನು ಧಕ್ಕೆ?)

**—ಈ ಸಂಗತಿಗಳೆಲ್ಲ ಅಲ್ಲವಾದರೆ ಅಲ್ಲವೆನ್ನಿ! (ಹೌದಾದರೆ ಅಲ್ಲವೆನ್ನಬೇಡಿ!)**

ಅಂದಹಾಗೇ—

ಹಿಂದಿನ ಒಂದು ಪ್ರಕರಣದ ಬಿಸಿಯಲ್ಲಿ ಬಂದಿದ್ದ ಬೇಗಾನೆಯವರ ಹತ್ತಿರ ಎಸ್ಸೈ ವರ್ಗಕ್ಕೆ ಒತ್ತಾಯ ಬಂದಾಗ ಅದನ್ನು ವಿರೋಧಿಸಿ ಮನವಿ ಪತ್ರ ಅರ್ಪಿಸಿದ ನಾನೂರುಗಟ್ಲೆ ಜನ, ವರ್ಗಮಾಡಿದರೆ ಉಪವಾಸ ಸತ್ಯಾಗ್ರಹ ಹೂಡುವುದಾಗಿ ಡಿವೈಎಸ್ಪಿಯವರಿಗೆ ಹೇಳಿದ ಜನ, ವರ್ಗ ವಿರೋಧಿಸಿ ಮೆರವಣಿಗೆ ನಡೆಸಿದ ಬೆಸ್ತ ಜನ, ತಮ್ಮ ಮೇಲಿನ ದಬ್ಬಾಳಿಕೆ, ದೌರ್ಜನ್ಯದ ವಿರುದ್ಧ ಎಸ್ಪಿಗಳಿಗೆ ಆಗಾಗ್ಗೆ ಮೊರೆ ಇಟ್ಟ ಸುಸ್ತಿ ಜನ ಮುಂತಾದ ಹತ್ತಾರು ನೂರು ಜನ ಎಸ್ಪಿಗಳಿಗೆ ಹೇಳುತ್ತಿದ್ದಾರಂತೆ — ಸ್ವಾಮಿ, ಈ ರೀತಿ ಕ್ರಮ ತೆಗೆದುಕೊಳ್ಳುವಂತೆ ನಿಮ್ಮ ಮೇಲೆ ಬಂದ ಎಲ್ಲ ರೀತಿಯ — ಜಾತಿಯ ಅಗಾಧ ಒತ್ತಾಯವನ್ನು ನೀವು ಕಡೆತನಕ ತಡೆದು ನಿಂತಿದ್ದನ್ನು ನಾವು ಖಂಡಿತಾ ಮೆಚ್ಚಿದ್ದೇವೆ. ಆದರೂ ಈ ಕ್ರಮ ತೆಗೆದುಕೊಂಡುಯಿತು. ಈಗ ನ್ಯಾಯ ಲಕ್ಷ್ಮಣರದ್ದಿರಲಿ ಅಥವಾ ಅವರಿಂದ 'ಅನ್ಯಾಯ'ಕ್ಕೊಳಗಾದವರದ್ದಿರಲಿ, ವಿಚಾರಣೆಯನ್ನು ಬೇಗ ನಡೆಸಿ ನ್ಯಾಯ ಸಲ್ಲಬೇಕಾದವರಿಗೆ ಬೇಗ ನ್ಯಾಯ ಕೊಡಿಸಿ. ತಡಮಾಡಿ ನ್ಯಾಯ ನಿರಾಕರಿಸಬೇಡಿ ಅಂತ.

**—ಇದೂ ಅಲ್ಲವಾದರೆ ಅಲ್ಲವೆನ್ನಿ!!**

## ಶಿಕ್ಷಣಕ್ಷೇತ್ರದಲ್ಲಿ ಭ್ರಷ್ಟಾಚಾರ

(೨ನೇ ಪುಟದಿಂದ)

ವಿಮರ್ಶಿಸಿ ತಪ್ಪನ್ನು ಪ್ರಶ್ನಿಸುವ ಮನೋಭಾವ ಬೆಳೆಸಿಕೊಂಡು ಅನ್ಯಾಯದ ವಿರುದ್ಧ ದಿಟ್ಟತನದಿಂದ ಹೋರಾಡಬೇಕೆಂದು ಕರೆ ಕೊಟ್ಟರು.

೨ನೇ ಪುಟದಲ್ಲಿ 'ಅಲ್ಲವಾದರಲ್ಲವೆನ್ನಿ' ಲೇಖನದ ೨ನೇ ಕಾಲಂನ ಎರಡನೇ ಸಾಲಿನಲ್ಲಿ 'ಬಲವಿರಲಿಲ್ಲವಂತೆ' ಎಂಬುದನ್ನು 'ಒಲವಿರಲಿಲ್ಲವಂತೆ' ಎಂದು ಓದಿಕೊಳ್ಳಿ.

—ಸಂ.

## ಬೊಮ್ಮಲಾಪುರ ಪಂಚಾಯ್ತಿ: ಅಧ್ಯಕ್ಷ ಕುರ್ಚಿ ಯಾರಿಗೆ?

(ವರದಿ: ಜಿ.ಬಿ.ಗೋಪಾಲಕೃಷ್ಣ, ಕೆ.ಜಿ.ವೀರಪ್ಪಗೌಡ)

ಕೊಪ್ಪ ತಾಲೋಕು ಬೊಮ್ಮಲಾಪುರ ಗ್ರಾಮ ಪಂಚಾಯ್ತಿ ಅಧ್ಯಕ್ಷರು ತಮ್ಮ ಸ್ಥಾನಕ್ಕೆ ಇತ್ತೀಚೆಗೆ ರಾಜೀನಾಮೆ ನೀಡಿದ್ದು ರಾಜೀನಾಮೆಯ ಹಿನ್ನೆಲೆ ಏನೆಂದು ಸ್ಪಷ್ಟವಾಗಿಲ್ಲ. ಕೆಲವು ಪತ್ರಿಕಾ ವರದಿಗಳಂತೆ ಪಂಚಾಯ್ತಿಯ ಪ್ರಗತಿ ಅಭಿವೃದ್ಧಿ ಸಾಕಷ್ಟು ಆಗಿಲ್ಲ ಎಂಬ ಅಸಂತೋಷ ಊರಿನವರಿಗಿದ್ದರೂ ಆಡಳಿತದಲ್ಲಿ ಯಾವುದೇ ರೀತಿಯ ಲೋಪದೋಷವೂ ಆಗಿಲ್ಲ ಎಂಬುದಂತೂ ಸ್ಪಷ್ಟ.

ಮುಂದಿನ ಅಧ್ಯಕ್ಷರು ಯಾರು? ಎಂಬ ಬಗ್ಗೆ ಊರಿನವರಲ್ಲಿ, ಪಂಚಾಯ್ತಿ ಸದಸ್ಯರಲ್ಲಿ ಗುಸು, ಗುಸು ಪ್ರಾರಂಭ. ಪಂಚಾಯ್ತಿಯ ಸರ್ವತೋಮುಖ ಏಳಿಗೆಯ ದೃಷ್ಟಿಯಿಂದ ಜನಾನುರಾಗಿಯಾಗಿರುವ ಮಾಜಿ ಅಧ್ಯಕ್ಷ ಕೋಣೆಗದ್ದೆಯ ಶ್ರೀ ಕೆ.ಎಸ್. ಪದ್ಮನಾಭ ಅವರನ್ನು ಪುನಃ ಕರೆತಂದು ಅಧ್ಯಕ್ಷ ಗದ್ದುಗೆ ಏರಿಸಬೇಕೆಂಬ ಸಲಹೆ ಅನೇಕರಲ್ಲಿ ಇದೆ. ಸದಸ್ಯರ ಬಹುಮತವೂ ಕಂಡು ಬರುತ್ತಿದೆ.

ಆದರೆ ಪದ್ಮನಾಭ ಅವರಿಗೆ ಸದಸ್ಯರಾಗಲು ಸ್ಥಳ ತೆರವಾಗಬೇಕಾಗಿರುವುದು ಮುಖ್ಯ ಪ್ರಶ್ನೆ. ಈಗಾಗಲೇ ಇದಕ್ಕೆ ಕೆಲವು ಆಪ್ತ ಸದಸ್ಯರು ತಾವಾಗಿಯೆ ರಾಜೀನಾಮೆ ಕೊಡಲು ಮುಂದಾಗಿದ್ದು ಅವರನ್ನು ಸ್ಪರ್ಧಿಸುವಂತೆ ಮನವೊಲಿಸಲು ಒಂದು ಕಡೆ ಪ್ರಯತ್ನ. ಹಾಗಾಗದಿದ್ದಲ್ಲಿ, ಈಗಿರುವ ಸದಸ್ಯರಲ್ಲೇ ಅಧ್ಯಕ್ಷರ ಆಯ್ಕೆಗೆ ೨-೩ ಗುಂಪುಗಳ ಪೈಪೋಟಿ.

ಶೀರಾ ಬಿಂದುಳಿದ ಈ ಪಂಚಾಯ್ತಿ ವ್ಯಾಪ್ತಿಯಲ್ಲಿ ಹಾಲಿ ರೂಪುಗೊಂಡಿರುವ ಮಹಿಳಾಮಂಡಳಿ, ಅಂಗನವಾಡಿ ಮುಂತಾದ ಕಾರ್ಯಗಳು ಯಶಸ್ವಿಯಾಗಲು ದಕ್ಷ ಆಡಳಿತಗಾರರು ಬೇಕೇ ಬೇಕು. ಮುಂದಿನ ಬೆಳವಣಿಗೆಗಳನ್ನು ಊರಿನವರು ಕಾಯುತ್ತಾ ಇದ್ದಾರೆ.

### ಕೊಪ್ಪ ಕರ್ನಾಟಕ ಬ್ಯಾಂಕಿನಿಂದ ಎಮ್ಮೆ ಸಾಲ ಹಂಚಿಕೆ

ಕೊಪ್ಪ: ತಲಾ ೨,೦೦೦ದಿಂದ ೨,೩೦೦ ರೂ. ಬೆಲೆಯ (ಒಟ್ಟು ೧೮,೦೦೦ ರೂ.) ೮ ಎಮ್ಮೆಗಳನ್ನು ನ. ೩೦ರಂದು ಇಲ್ಲಿನ ಕರ್ನಾಟಕ ಬ್ಯಾಂಕ್ ಶಾಖೆ ದುರ್ಬಲ ವರ್ಗದವರಿಗೆ ಹಂಚಿತು. ನ. ೪ರಂದು ಒಂದು ಎಮ್ಮೆ ಸಾಲ ಸೇರಿದಂತೆ ೮ ಜನರಿಗೆ ವ್ಯಾಪಾರೋದ್ಯಮಗಳಿಗಾಗಿ ೧೬,೦೦೦ ರೂ. ಸಾಲ ಹಂಚಿರುವುದಾಗಿ ಮ್ಯಾನೇಜರ್ ಎ. ಎಂ. ಸುಬ್ರಹ್ಮಣ್ಯ ಶಾಸ್ತ್ರಿ 'ಮುಂಜಾವು'ಗೆ ತಿಳಿಸಿದ್ದಾರೆ.

### ಹಾಸನ - ಶೃಂಗೇರಿ ಸರ್ಕಾರಿ ಬಸ್ಸಿಗೆಪರವಾನಗಿ

ಚಿಕ್ಕಮಗಳೂರು: ಬಹಳ ದಿನಗಳಿಂದ ನಿಂತು ಹೋಗಿದ್ದ ಹಾಸನ ಶೃಂಗೇರಿ ನೇರ ಎಕ್ಸ್‌ಪ್ರೆಸ್ ಬಸ್ಸಿನ ಓಡಾಟಕ್ಕೆ ಪುನಃ ರಹದಾರಿ ದೊರೆತಿರುವುದಾಗಿ ವರದಿಯಾಗಿದೆ.

### ಹೃದಯ ವೈಶಾಲ್ಯದ ಮೌಲ್ಯ ಹದಗೆಟ್ಟಿದೆ.

—ಹೇರೂರು ಮೆನನ್

ಶೃಂಗೇರಿ: ನ.೨೯ರಂದು ಶೃಂಗೇರಿ ಜೆ. ಸಿ.ಬಿ.ಎಂ. ಕಾಲೇಜಿನಲ್ಲಿ ನಡೆದ ರಾಜ್ಯೋತ್ಸವ ಕವಿಗೋಷ್ಠಿ ಸಮಾರಂಭದ ಅಧ್ಯಕ್ಷತೆ ವಹಿಸಿ 'ಹೇರೂರು ಮೆನನ್' ಎಚ್.ವಿ. ಮಹಾಬಲಯ್ಯನವರು ಮಾತನಾಡುತ್ತಾ "ನಮ್ಮ ಹೃದಯ ವೈಶಾಲ್ಯದ ಮೌಲ್ಯ ಹದಗೆಟ್ಟಿದೆ. ಕನ್ನಡಿಗರಲ್ಲಿ ನಾವೆಲ್ಲ ಒಂದೇ ಎಂಬ ಸಮಷ್ಟಿ ಪ್ರಜ್ಞೆ ಬೆಳೆಯ ಬೇಕು. ನಾವು ಆಶಾಪೂರ್ಣ ಭವಿಷ್ಯದತ್ತ ಸಾಗಬೇಕು. ಆಧುನಿಕತೆಯ ಪರದೆಯ ಹಿಂದೆ ಇತಿಹಾಸದ ಪಳೆಯುಳಿಕೆಗಳನ್ನು ಗಮನಿಸಬೇಕು" ಎಂದು ಹೇಳಿ "ವರ್ತಮಾನವನ್ನು ಇತಿಹಾಸದ ತಿಳುವಳಿಕೆಯಿಂದ ರೂಪಿಸಿಕೊಳ್ಳೋಣ" ಎಂದು ಕರೆಕೊಟ್ಟರು.

ಮುಖ್ಯ ಅತಿಥಿಗಳಾಗಿ ಆಗಮಿಸಿದ್ದ ಉಡುಪಿಯ ಬಿ.ವಿ.ಕೆದಿಲಾಯರು ಕವಿ ಗೋಪಾಲಕೃಷ್ಣ ಅಡಿಗರ ಕಾವ್ಯದ ಬಗ್ಗೆ ರಸವತ್ತಾಗಿ ಉದಾಹರಣೆ ಸಹಿತ ಪರಿಚಯಿಸಿ ಮಾತನಾಡಿದರು.

ಕುಮಾರಿ ವಿಜಯಲಕ್ಷ್ಮಿ ಪ್ರಾರ್ಥನೆ ನಂತರ ವಿದ್ಯಾರ್ಥಿ ಸಂಘದ ಕಾರ್ಯದರ್ಶಿ ಎ. ಶ್ರೀನಿವಾಸ ಮೂರ್ತಿ ಸ್ವಾಗತಿಸಿದರು. ಬಿ. ಸಿ. ವಿಜಯರಾಘವ ಕೊನೆಯಲ್ಲಿ ವಂದಿಸಿದರು.

(ವರದಿ: ಎಚ್.ವಿ.ಎಸ್.ವಿ.)

ಸಂಪಾದಕ, ಮುದ್ರಕ ಮತ್ತು ಪ್ರಕಾಶಕ:
ಸಿರಿಮನೆ ನಾಗರಾಜ್.
ಅಚ್ಚು: ದೀವಟಿಗೆ ಅಚ್ಚುಕೂಟ, ಕೊಪ್ಪ

### ಸಾಲ ವಿತರಣೆ

ಬೇಗಾರು: ಇಲ್ಲಿನ ವ್ಯವಸಾಯ ಸೇವಾ ಸಹಕಾರ ಸಂಘದಲ್ಲಿ ನ. ೨೬ರಂದು ಚಿಕ್ಕಮಗಳೂರು ಜಿಲ್ಲಾ ಬ್ಯಾಂಕ್‌ನ ಆರ್ಥಿಕ ನೆರವಿನಿಂದ ದುರ್ಬಲ ವರ್ಗದವರಿಗೆ ಸಾಲ ವಿತರಣೆ ಮಾಡಲಾಯಿತು.

ಈ ಸಮಾರಂಭದ ಅಧ್ಯಕ್ಷತೆಯನ್ನು ಸಂಘದ ಅಧ್ಯಕ್ಷ ಎ.ಎಂ. ಹೂವಪ್ಪಗೌಡ ವಹಿಸಿದ್ದರು. ಮುಖ್ಯ ಅತಿಥಿಯಾಗಿದ್ದ ದೇವೇಂದ್ರ ಹೆಗ್ಡೆಯವರು ವಿಕಾಸ ಪತ್ರಿಕೆಯನ್ನು ಸಾಲ ಪಡೆದವರಿಗೆ ನೀಡಿದರು.

ಶೃಂಗೇರಿ ತಾಲ್ಲೂಕು ಅಭಿವೃದ್ಧಿ ಮಂಡಳಿ ಅಧ್ಯಕ್ಷ ಡಿ.ಕಳಸಪ್ಪ ಹೆಗ್ಡೆಯವರು ಮಾತಾಡಿ ಶೀಘ್ರದಲ್ಲಿಯೇ ಹಾಲಿನಡೈರಿಯನ್ನು ಪ್ರಾರಂಭಿಸುವುದಾಗಿ ತಿಳಿಸಿದರು.

ಬೇಗಾರು ಪಂಚಾಯ್ತಿ ಅಧ್ಯಕ್ಷ ಕೆ.ಟಿ. ಸಂಜೀವ ಗೌಡರು ಮಾತನಾಡಿ ಸಾಲವನ್ನು ಸರಿಯಾಗಿ ಮರು ಪಾವತಿಸಬೇಕಾಗಿ ಜನರಿಗೆ ಕರೆ ನೀಡಿದರು. ಬೇಗಾರು ಸಹಕಾರ ಸಂಘಗವು ಜನರಿಗೆ ಸರಿಯಾದ ಸಹಕಾರವನ್ನು ನೀಡುತ್ತಿರುವುದನ್ನು ಸಹ ಒತ್ತಿ ಹೇಳಿದರು.

ಶೃಂಗೇರಿ ತಾಲ್ಲೂಕು ಕ್ಷೇತ್ರಾಭಿವೃದ್ಧಿ ಅಧಿಕಾರಿ ಅನಂತಮೂರ್ತಿ ಮಾತನಾಡಿದರು.

ಸಂಘದ ಅಧ್ಯಕ್ಷ ಎ.ಎಂ.ಹೂವಪ್ಪಗೌಡರು ಮಾತನಾಡಿ ಇದುವರೆಗೆ ಚಿಕ್ಕಮಗಳೂರು ಜಿಲ್ಲಾ ಬ್ಯಾಂಕ್‌ನ ಆರ್ಥಿಕ ನೆರವಿನಿಂದ ೬೪ ಜನರಿಗೆ ೨ ಲಕ್ಷ ೨೨ ಸಾವಿರ ರೂ.ಗಳನ್ನು ಸಂಘದಿಂದ ಹಂಚಿರುವುದಾಗಿ ತಿಳಿಸಿದರು.

ಸಂಘದ ನಿರ್ದೇಶಕ ಹೆಚ್.ಎಸ್.ಚಂದ್ರಶೇಖರ್ ಸ್ವಾಗತಿಸಿ ಬೇಗಾರು ಕೃಷಿ ಸಹಾಯಕ ಪಿ.ಕೆ.ಕುಮರನ್ ವಂದಿಸಿದರು.

(ವರದಿ: ಎಸ್.ಕೆ.ಶೃಂಗೇಶ್ವರ.)

### ಮುಡುಬ ಸೇತುವೆ

(೫ನೇ ಪುಟದಿಂದ)

[ಅದಾದ ಕೆಲವೇ ದಿನಗಳಲ್ಲಿ "ಹತಾಶರಾದ ಕೆಲವು ಪುಂಡರು" ಉದ್ಘಾಟನಾ ಶಿಲಾ ಫಲಕವನ್ನು ರಾತ್ರಿ ವೇಳೆ ಕದ್ದಿದ್ದು, ಆ ನೀಚರ ವಿರುದ್ಧ ರೈತ ಸಂಘ ಉಗ್ರ ಕ್ರಮ ತೆಗೆದು ಕೊಳ್ಳುತ್ತದೆಂದು ಸಂಘದ ವಕ್ತಾರರು ಹೇಳಿದ್ದಾರೆ.]

### ವಿಚಾರಣೆ.....

(೧ನೇ ಪುಟದಿಂದ)

ಅಲ್ಲಿಯವರೆಗೆ ಪೋಷಕರ ಕ್ರಿಯಾ ಸಮಿತಿಯನ್ನು ಜೋರುಮಾಡಿ ಕಡೆಗಣಿಸಲು ಯತ್ನಿಸಿದ್ದ ಅಧಿಕಾರಿ ಅನಂತರ ಅವರ ಹೇಳಿಕೆಗಳನ್ನೂ ಸಾವಧಾನವಾಗಿ ಕೇಳಿಸಿಕೊಂಡರೆಂದು ಕ್ರಿಯಾಸಮಿತಿ ಪ್ರತಿನಿಧಿಗಳು ತಿಳಿಸಿದ್ದಾರೆ.

"ಆದರೆ ವಿಚಾರಣೆಗೆ ಬರುವ ಮೊದಲು ಆಡಳಿತ ಸಮಿತಿ ಜೊತೆ ಗಂಟೆಗಟ್ಟಲೆ ಕಳೆದು, ಅನಂತರವೂ ಅವರ ಜೊತೆಯಲ್ಲೇ ಪ್ರಯಾಣ ಬೆಳೆಸಿದ ಅಧಿಕಾರಿಗಳು ಯಾವುದೇ ಪ್ರಭಾವಕ್ಕೊಳಗಾಗದಿರಲಿ; ವಿಚಾರಣೆಯ ವರದಿ ನ್ಯಾಯಯುತ ಹಾಗೂ ನಿಷ್ಪಕ್ಷಪಾತವಾಗಿರಲಿ" ಎಂದು ಕ್ರಿಯಾ ಸಮಿತಿಯ ಪ್ರತಿನಿಧಿಗಳು ಆಶಿಸಿದ್ದಾರೆ.

## ಸ. ಇ. ಲಕ್ಷ್ಮಣ್ ಅವಮಾನತು: ದಲಿತ ಸಂಘರ್ಷ ಸಮಿತಿ ಖಂಡನೆ

ಚಿಕ್ಕಮಗಳೂರು: ನ.ರಾ.ಪುರದ ಠಾಣಾಧಿಕಾರಿ ಆರ್.ಲಕ್ಷ್ಮಣ್‌ರವರನ್ನು ಅಮಾನತಿನಲ್ಲಿಟ್ಟಿರುವುದನ್ನು ಕರ್ನಾಟಕ ದಲಿತ ಸಂಘರ್ಷ ಸಮಿತಿಯ ಚಿಕ್ಕಮಗಳೂರು ಜಿಲ್ಲಾ ಶಾಖೆ ಖಂಡಿಸುತ್ತಾ ಈ ಕೆಳಗಿನಂತೆ ಹೇಳಿಕೆ ಕೊಟ್ಟಿದೆ:

ನ.ರಾ.ಪುರ ತಾಲ್ಲೂಕಿನ ಮಡಬೂರಿನಲ್ಲಿ ಭೂ ವಿವಾದದಲ್ಲಿ ಇತ್ತೀಚೆಗೆ ನಡೆಯುತ್ತಿರುವ ಎರಡು ಗುಂಪುಗಳ ವೈಮನಸ್ಸಿನಿಂದ ಅಲ್ಲಿನ ಭೂ ಹೀನರು ತಲೆಯೆತ್ತಿ ತಿರುಗದಂತಾಗಿದೆ. ಭೂಮಿ ಮನೆ ಕಳೆದು ಕೊಂಡು ಕೆಲವರು ಕಂಗಲಾಗಿದ್ದಾರೆ. ೧೯೭೨ರಿಂದ ಅರ್ಜಿ ಸಲ್ಲಿಸಿದರೂ ಜಮೀನು ಮಂಜೂರು ಮಾಡದೆ ಇರುವಲ್ಲಿ ರಾಜಕೀಯ ಪ್ರತಿಷ್ಠಿತ ವ್ಯಕ್ತಿಗಳ ಕೈವಾಡ ಹಾಗೂ ಸರ್ಕಾರಿ ಅಧಿಕಾರಿಗಳ ಬೇಜವಾಬ್ದಾರಿತನವನ್ನು ದ.ಸಂ.ಸ. ಉಗ್ರವಾಗಿ ಖಂಡಿಸುತ್ತದೆ. ಮೇಲ್ಪಂಡೆ ಗ್ರಾಮದ ಸ.ನಂ.೪೦ರಲ್ಲಿ ಕೆಲವು ಬಡವರು ಜಮೀನಿಗೆ ಅರ್ಜಿ ಸಲ್ಲಿಸಿ, ಮಂಜೂರಾತಿ ಕಾಯ್ದು ಅದೇ ಜಮೀನಿನಲ್ಲಿ ಗುಡಿಸಲುಗಳನ್ನು ಹಾಕಿಕೊಂಡಿದ್ದು ಆ ಗುಡಿಸಲುಗಳಿಗೆ ಬೆಂಕಿ ಹಚ್ಚಿ ಒಕ್ಕಲೆಬ್ಬಿಸುವ ಡಾ|| ನಾಗರಾಜರವರ ಕೃತ್ಯವನ್ನು ದ.ಸಂ.ಸ. ಖಂಡಿಸುತ್ತದೆ. ಹಾಲಿ ಜಮೀನನ್ನು ಡಾಕ್ಟರ್ ನಾಗರಾಜರವರಿಗೆ ಮಂಜೂರು ಮಾಡದೇ ೧೯೭೨ರಿಂದ ಜಮೀನು ಕೋರಿ ಅರ್ಜಿ ಸಲ್ಲಿಸಿರುವ ಬಡವರಿಗೆ ಮಂಜೂರು ಮಾಡುವಂತೆ ಒತ್ತಾಯಿಸುತ್ತದೆ.

ದ.ಸಂ.ಸ. ಕಾರ್ಯಕರ್ತರು ದಿನಾಂಕ ೨೧-೧೧-೮೨ರಂದು ನ.ರಾ.ಪುರಕ್ಕೆ ಭೇಟಿ ನೀಡಿ ಈಗ ಅಮಾನತ್ತಿನಲ್ಲಿರುವ ಸ.ಇ. ಲಕ್ಷ್ಮಣ್ ಬಗ್ಗೆ ಅಲ್ಲಿನ ಅನೇಕರನ್ನು ವಿಚಾರಿಸಿದಾಗ ಎಲ್ಲರಿಂದಲೂ ಸ.ಇ.ಲಕ್ಷ್ಮಣ ಪ್ರಾಮಾಣಿಕ ವ್ಯಕ್ತಿಯೆಂದೂ ಅವರು ಇಲ್ಲಿಗೆ ಬಂದ ಮೇಲೆ ಬಡವರು ಉಸಿರಾಡುವಂತೆ ಆಯಿತೆಂದೂ ಅನೇಕ ಜನರ ಅಭಿಪ್ರಾಯವಾಗಿದೆ. ನ.ರಾ.ಪುರದಲ್ಲಿ ನಡೆಯುತ್ತಿದ್ದ ಜೂಜು, ಪುಂಡಾಟಿಕೆ, ವೇಶ್ಯಾವಾಟಿಕೆ, ದಲಿತರ ಮೇಲೆ ದೌರ್ಜನ್ಯ ಇವರು ಬಂದ ಮೇಲೆ ಕಡಿಮೆಯಾಗಿವೆ ಎಂದು ತಿಳಿದು ಬಂದಿರುತ್ತದೆ. ಕೆಲವು ಸಮಯ ಸಾಧಕರು ಡಾ|| ನಾಗರಾಜರವರ ಘಟನೆಯ ಪ್ರಕರಣವನ್ನು ತಮ್ಮ ಸ್ವಾರ್ಥ ಸಾಧನೆಗೆ ಬಳಸಿಕೊಳ್ಳ ಹೊರಟಿದ್ದಾರೆಂದು ಅಭಿಪ್ರಾಯಪಟ್ಟಿದ್ದಾರೆ.

ಇಂಥ ಪ್ರಾಮಾಣಿಕ ಸಬ್ ಇನ್ಸ್‌ಪೆಕ್ಟರನ್ನು ಅಮಾನತಿನಲ್ಲಿಟ್ಟಿರುವುದನ್ನು ದ.ಸಂ.ಸ. ಖಂಡಿಸುತ್ತದೆ. ಈ ಬಗ್ಗೆ ಸರ್ಕಾರ ಕೂಡಲೇ ಗಮನ ಹರಿಸಿ ಅಮಾನತ್ತನ್ನು ವಜಾ ಮಾಡಬೇಕೆಂದು ಒತ್ತಾಯಿಸುತ್ತದೆ.

ಈ ಸಂಬಂಧವಾಗಿ ಸತ್ಯವನ್ನು ಪ್ರಕಟಿಸಲು ಶ್ರಮಿಸಿದ ಪತ್ರಿಕೆಗಳ ಸಂಪಾದಕರು ಮತ್ತು ಅವರ ವರದಿಗಾರರ ಮೇಲೆ ಹಲ್ಲೆ ಮಾಡಿದವರ ಮೇಲೆ ಸೂಕ್ತ ಕ್ರಮ ಕೈಗೊಳ್ಳಬೇಕೆಂದು ದ.ಸಂ.ಸ. ಒತ್ತಾಯಿಸುತ್ತದೆ.

### ಚುನಾವಣೆ ಚಟುವಟಿಕೆ ಶುರು 'ಬಿಗಿ'?

ಈ ಮಧ್ಯೆ, ಬೇಗಾನೆಯವರ ಹತ್ತಿರದ ಸಂಬಂಧಿಯೂ ಆದ ಗೋವಿಂದಗೌಡರು ನಿಂತರೆ ತಮಗೆ ಬಹಳ 'ಬಿಗಿ' ಯಾಗುವುದರಿಂದ ಅವರನ್ನು ಸ್ಪರ್ಧಿಸದಂತೆ ಮನವೊಲಿಸಲು ಕಾಂಗ್ರೆಸ್ ನಿಯೋಗವೊಂದು ಪ್ರಯತ್ನಿಸಿತೆಂದು ದಟ್ಟವಾಗಿ ಹಬ್ಬಿದ್ದ ವದಂತಿಯನ್ನು ಗೌಡರು ಒಕ್ಕೂಟದ ಕಾರ್ಯಕರ್ತರ ಸಭೆಯಲ್ಲಿ ಅಲ್ಲಗಳೆದಿದ್ದಾರೆ. "ನನ್ನನ್ನು ನೀವೆಲ್ಲ ಅಭ್ಯರ್ಥಿ ಅಂತ ಆರಿಸಿದ ಮೇಲೆ ನಾನಿನ್ನು ನೀವು ಹೇಳಿದಂತೆ ಕೇಳುವವ. ಯಾವ ಆಮಿಷ, ಪ್ರಭಾವ, ಒತ್ತಡಗಳಿಗೂ ಸೊಪ್ಪು ಹಾಕುವುದಿಲ್ಲ" ಎಂದು ಘೋಷಿಸಿದ್ದಾರೆ.

ಜನ......?

ಮತದಾರ ಜನತೆ ಅಲ್ಲಲ್ಲಿ ಅಲ್ಪಸ್ವಲ್ಪ ಚುನಾವಣೆ ಬಗ್ಗೆ ಮಾತಾಡುತ್ತಿದ್ದರೂ ಬಿಸಿ ಬಿಸಿ ಚರ್ಚೆಗಳು ಇನ್ನೂ ಎಲ್ಲೂ ಕಂಡುಬಂದಿಲ್ಲ.

# "...ಈ ಸಮಸ್ಯೆ ನಿವಾರಿಸಿ..."

## ಇಲ್ಲಗಳ ಕೂಪ

"ಕೊಪ್ಪ ಸರ್ಕಾರಿ ಆಸ್ಪತ್ರೆಯೊಂದು 'ಇಲ್ಲ'ಗಳ ಕೂಪವಾಗಿದೆ.

ಲಕ್ಷಾಂತರ ರೂ. ವೆಚ್ಚದ ಎಕ್ಸ್‌ರೇ ಯಂತ್ರ ತಂತ್ರಜ್ಞರಿಲ್ಲದೆ ಧೂಳು ತಿನ್ನುತ್ತಿದೆ. ಈ ಭಾಗದ ಜನರಿಗೆ ಈಗ ಹತ್ತಿರದ ಎಕ್ಸ್‌ರೇ ಸೌಲಭ್ಯವೆಂದರೆ ಕೊರ್ಡಹಿತ್ಲಿಸದು. ಎಷ್ಟು ಜನರಿಗೆ ಅಲ್ಲಿಯವರೆಗೆ ಹೋಗಿ, ದುಡ್ಡುಕೊಟ್ಟು ಎಕ್ಸ್‌ರೇ ಮಾಡಿಸಲು ಆಗುತ್ತೆ? ಆದರ ಮೇಲೆ ಅಲ್ಲಿಗೆ ಸರಿಯಾದ ಸಾರಿಗೆ ವ್ಯವಸ್ಥೆಯೂ ಇಲ್ಲ. ಕೊಪ್ಪದ ಆಸ್ಪತ್ರೆಗೆ ಸರ್ಕಾರ ಕೂಡಲೇ ಎಕ್ಸ್‌ರೇ ತಂತ್ರಜ್ಞರೊಬ್ಬರನ್ನು ನೇಮಿಸಲಿ.

ಹಾಗೆಯೇ ಇಲ್ಲಿ ಹಲ್ಲಿನ ವೈದ್ಯರೂ ಇಲ್ಲ. ದುಬಾರಿ ಬೆಲೆಯ ಉಪಕರಣಗಳು ಒಂದು ರೀತಿ ವ್ಯರ್ಥವಾಗುತ್ತಿದ್ದರೆ ಇನ್ನೊಂದು ಕಡೆ ಜನ ಅನಾನುಕೂಲ್ಯಪಡುತ್ತಿದ್ದಾರೆ. ಕೂಡಲೇ ಹಲ್ಲಿನ ವೈದ್ಯರ ನೇಮಕವಾಗಲಿ.

ಇಲ್ಲಿನ ಮಹಿಳಾ ವೈದ್ಯರಿಗೆ ವರ್ಗವಾಗಿ ಇಷ್ಟು ಸಮಯವಾದರೂ ಬೇರೆ ನೇಮಕವಾಗಿಲ್ಲ. ಇಷ್ಟು ದೊಡ್ಡ ಕೇಂದ್ರಕ್ಕೆ ಒಬ್ಬರು ಮಹಿಳಾ ವೈದ್ಯೆ ಸಾಲದು. ಅಂಥದರಲ್ಲಿ ಒಬ್ಬರೂ ಇಲ್ಲದಿದ್ದರೆ ಜನಜೀವನದ ಗತಿ ಏನು?

ಈ ಚುನಾವಣೆಗೆ ಮುಂಚೆಯಾದರೂ ಊರಿನ ಮುಖಂಡರು, ನಾಯಕರುಗಳು ಈ ಬಗ್ಗೆ ಗಮನ ಹರಿಸುವರೆ?" –ಎಂದು ಕೇಳಿದ್ದಾರೆ ಕೊಪ್ಪದ ಕಳಕಳಿಯ ನಾಗರಿಕರೊಬ್ಬರು.

## ಸೀಮೆಎಣ್ಣೆ ಕೊರತೆ

ಕೊಪ್ಪದಲ್ಲಿ ಪುನಃ ಸೀಮೆಎಣ್ಣೆ ಕ್ಷಾಮ ತಲೆದೋರಿದೆ. ಸೀಮೆಎಣ್ಣೆ ಬಂದ ದಿನ ತಲಾ ಒಂದೊಂದು ಲೀಟರ್ ಕೊಡುತ್ತಾರೆ. ಹಿಂದೆಲ್ಲ ಯಥೇಚ್ಛವಾಗಿ ಸಿಗುತ್ತಿತ್ತು. ಈಗ ಕಾಳಸಂತೆಯಲ್ಲಿ ಹೋಗುತ್ತಿದೆ ಎಂಬ ದೂರು ವ್ಯಾಪಕವಾಗಿ ಕೇಳಿಬರುತ್ತಿದೆ. ಅಂಗಡಿಯವರನ್ನು ಕೇಳಿದರೆ– "ಎರಡು ಸರ್ತಿ ಬರಬೇಕಾದಲ್ಲಿ ಒಂದು ಸರ್ತಿ ಬರುತ್ತಿದೆ. ಬಂದಾಗಲೂ ಅರ್ಧಕ್ಕರ್ಧ ಕೊಡುತ್ತಾರೆ. ಸರಬರಾಜು ಸರಿಯಾಗಿ ಮಾಡಿಸಿ" ಎಂದು ನಮಗೇ ಹೇಳುತ್ತಾರೆ.

ತಹಸೀಲ್ದಾರರಿಗೆ ದೂರಲಾಗಿ ಅವರು ಒಮ್ಮೆ ಬಂದು ಅಂಗಡಿಗಳ ದಾಸ್ತಾನು ಪರೀಕ್ಷಿಸಿ, ಜೋರುಮಾಡಿ ಹೋಗಿದ್ದಾರೆ. ಆದರೂ ಸೀಮೆಎಣ್ಣೆ ಕ್ಷಾಮ ನೀಗಿಲ್ಲ. ಕೂಡಲೇ ಸೀಮೆಎಣ್ಣೆ ಸಂಬರಾಜಾಗಲಿ– ಎಂದಿದ್ದಾರೆ ಕೊಪ್ಪದ ಒಬ್ಬ ಗ್ರಾಹಕರು.

## ಪೇಟೆಯ ಮಕ್ಕಳಿಗೆ ರಂಗಮಂದಿರ ಬೇಡವೆ?

ಸರ್ಕಾರದ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಯೋಜನೆಯಲ್ಲಿ ಹಳ್ಳಿ ಹಳ್ಳಿಗಳಲ್ಲಿ ರಂಗಮಂದಿರಗಳನ್ನು ಕಟ್ಟಿಸಲಾಗುತ್ತಿದೆ. ಆದರೆ ಪುರಸಭೆಯಿರುವ ಪಟ್ಟಣಗಳು ಈ ಯೋಜನೆಗೆ ಹೊರತು. ಕೊಪ್ಪದಂಥ ಪಟ್ಟಣದ ಸಾವಿರಾರು ಮಕ್ಕಳ ಸಾಂಸ್ಕೃತಿಕ ಬೆಳವಣಿಗೆಗೆ, ಪ್ರದರ್ಶನಕ್ಕೆ ಬೇಕೇ ಬೇಕಾಗಿರುವ ಒಂದು ರಂಗಮಂದಿರ ಕಟ್ಟಿಸುವವರು ಯಾರು? ಇಲ್ಲಿನ ಪ್ರಾಥಮಿಕ ಶಾಲೆಯ ಆವರಣದಲ್ಲಿ ವರ್ಷಂಪ್ರತಿ ಹತ್ತಾರು ಕಾರ್ಯಕ್ರಮಗಳು ನಡೆಯುತ್ತವೆ. ಪ್ರತಿ ಸಲ ವೇದಿಕೆ ಕಟ್ಟಲು-ಬಿಚ್ಚಲು ನೂರಾರು ರೂ. ದಂಡ ಮಾಡುತ್ತಿದ್ದಾರೆ.

ಆದ್ದರಿಂದ ಪುರಸಭೆಯವರಾಗಲೀ, ಲೋಕೋಪಯೋಗಿ ಇಲಾಖೆಯವರಾಗಲೀ ಈ ಕಡೆ ತುರ್ತಾಗಿ ಗಮನ ಕೊಡಬೇಕಾಗಿದೆ– ಎಂದಿದ್ದಾರೆ, ಮಕ್ಕಳ ಎಲ್ಲಾ ಮುಖಗಳ ಬೆಳವಣಿಗೆ ಬಗ್ಗೆ ಚಿಂತಿಸುವ ಒಬ್ಬರು ಅಧ್ಯಾಪಕರು.

"ಉಳಿತಾಯವೇ ಉತ್ತಮ ವೆಚ್ಚ"

ಡಯಾಸ್ ಫೈನಾನ್ಸ್

ಠೇವಣಿಗಳ ಮೇಲೆ ಆಕರ್ಷಕ ಬಡ್ಡಿದರಗಳು

ಫಿಕ್ಸೆಡ್ ಡಿಪಾಜಿಟ್‌ಗಳು:

3 ತಿಂಗಳು ಮತ್ತು ಮೇಲ್ಪಟ್ಟು ಶೇ. 8
6 ತಿಂಗಳು ಮತ್ತು ಮೇಲ್ಪಟ್ಟು ಶೇ. 11
12 ತಿಂಗಳು ಮತ್ತು ಮೇಲ್ಪಟ್ಟು ಶೇ. 14
24 ತಿಂಗಳು ಮತ್ತು ಮೇಲ್ಪಟ್ಟು ಶೇ. 15
36 ತಿಂಗಳು ಮತ್ತು ಮೇಲ್ಪಟ್ಟು ಶೇ. 16

ಪಿಗ್ಮಿ ಡಿಪಾಜಿಟ್‌ಗಳು:

ಮೊದಲ ತಿಂಗಳಿಂದ 24 ತಿಂಗಳವರೆಗೆ ಶೇ: 4
25 ತಿಂಗಳಿಂದ 36 ತಿಂಗಳವರೆಗೆ ಶೇ. 6
37ನೇ ತಿಂಗಳಿಂದ ಶೇ. 8

ಬೇಗನೇ ನಿಮ್ಮ ಖಾತೆಗಳನ್ನು ತೆರೆದು ಉತ್ತಮ ದರದ ಬಡ್ಡಿ ಪಡೆಯಿರಿ.
ಹೆಚ್ಚಿನ ವಿವರಗಳಿಗೆ ಕೂಡಲೇ ಭೇಟಿ ಮಾಡಿರಿ:

ಡಯಾಸ್ ಫೈನಾನ್ಸ್
ಮಾಲೀಕರು: ಫಾಸ್ಕಲ್ ಡಯಾಸ್, ಕೊಪ್ಪ.

# ಸುದ್ದಿ ಸಂಗ್ರಹ

### ರಾಜ್ಯಕ್ಕೆ ತೆಂಗು ಸಂಶೋಧನ ಕೇಂದ್ರ

ಕರ್ಣಾಟಕದಲ್ಲಿ ತೆಂಗು ಸಂಶೋಧನ ಕೇಂದ್ರವೊಂದನ್ನು ಪ್ರಾರಂಭಿಸುವುದಾಗಿ ಕೇಂದ್ರ ಕೃಷಿ ಮಂತ್ರಿಗಳು ಹೇಳಿದ್ದಾರೆ.

### ಮಾಜಿ ಪಟೇಲರಿಗೂ ಮಾಸಾಶನ

ಮಾಜಿ ಶಾನುಭೋಗ, ತೋಟಿ, ತಳವಾರರಿಗೆ ನೀಡಿರುವಂತೆ ಮಾಜಿ ಪಟೇಲರಿಗೂ ಮಾಸಾಶನ ನೀಡುವುದಾಗಿ ಮುಖ್ಯಮಂತ್ರಿಗಳು ವಿಧಾನಸಭೆಯಲ್ಲಿ ಪ್ರಕಟಿಸಿದ್ದಾರೆ.

### ಅರುಣ್‌ಶೌರಿ ಇಂಡಿಯನ್ ಎಕ್ಸ್‌ಪ್ರೆಸ್ ತೊರೆದರು

ತಮ್ಮ ಅತ್ಯುತ್ತಮ ಪತ್ರಿಕಾ ಬರವಣಿಗೆಗಳ ಮೂಲಕ 'ಅಂತರರಾಷ್ಟ್ರೀಯ ಸಂಪಾದಕ' ಹಾಗೂ ಮ್ಯಾಗ್ಸೇಸೆ ಪ್ರಶಸ್ತಿಗಳನ್ನು ಗಳಿಸಿ ಭಾರತೀಯ ಪತ್ರಿಕೋದ್ಯಮಕ್ಕೆ ಅಪೂರ್ವ ಖ್ಯಾತಿ ತಂದಿದ್ದ ಡಾ॥ ಅರುಣ್‌ಶೌರಿ 'ಇಂಡಿಯನ್ ಎಕ್ಸ್‌ಪ್ರೆಸ್' ಅನ್ನು ತೊರೆದಿದ್ದಾರೆ.

### ಮಹಿಳಾ ಸಮಾಜಕ್ಕೆ ಆಯ್ಕೆ

ಶಾನುವಳ್ಳಿ: ಸಮೀಪದ ಹೆಗ್ಗಾರು ಗ್ರಾಮದ ಮಹಿಳೆಯರು ಪಂಚಾಯ್ತಿ ಸದಸ್ಯ ಕೆ.ಟಿ.ಶ್ರೀನಿವಾಸ ನಾಯ್ಕರ ಅಧ್ಯಕ್ಷತೆಯಲ್ಲಿ ನ. ೨೮ರಂದು ಸಭೆ ಸೇರಿ 'ಚೇತನ ಮಹಿಳಾ ಸಮಾಜ'ಕ್ಕೆ ಈ ಕೆಳಕಂಡವರನ್ನು ಆಯ್ಕೆ ಮಾಡಿದ್ದಾರೆ: ಕು॥ ಎಂ.ಎಸ್. ರೇವತಿ(ಅಧ್ಯಕ್ಷೆ), ಶ್ರೀಮತಿ ಕೆ.ಬಿ.ರತ್ನಮ್ಮ (ಉಪಾಧ್ಯಕ್ಷೆ), ಕು॥ ಜೆ.ಡಿ.ಲೀಲಾವತಿ (ಕಾರ್ಯದರ್ಶಿ), ಕು॥ ಎಸ್.ಎಸ್.ಮಾಲತಿ (ಖಜಾಂಚಿ.)

ಸಮಾರಂಭದಲ್ಲಿ ಗ್ರಾಮಪಂಚಾಯ್ತಿ ಸದಸ್ಯ ಹೆಗ್ಗಾರು ಶಿವರಾಂ ಮುಖ್ಯ ಅತಿಥಿಗಳಾಗಿದ್ದರು.

(ವರದಿ: ಹೆಗ್ಗಾರು ಜಯಂತ್)

### ಮೇಲ್ಪಾಲಿನ ಕರ್ಣಾಟಕ ಬ್ಯಾಂಕಿನಲ್ಲಿ ಐ. ಆರ್. ಡಿ. ಪಿ. ಸಾಲ ವಿತರಣೆ

ಮೇಲ್‌ಪಾಲ್: ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆ ಆಶ್ರಯದಲ್ಲಿ ನ. ೨೫ ರಂದು ಕರ್ಕೇಶ್ವರ ಗ್ರಾಮ ಪಂಚಾಯಿತಿ ಅಧ್ಯಕ್ಷ ಶ್ರೀ ಕೆ. ಸಿ. ರಾಮಕೃಷ್ಣಯ್ಯನವರು ಕರ್ಣಾಟಕ ಬ್ಯಾಂಕ್, ಮೇಲ್‌ಪಾಲ್ ಶಾಖೆಯಿಂದ ಕೊಟ್ಟ ಐ. ಆರ್. ಡಿ. ಪಿ. ಸಾಲವನ್ನು ಹತ್ತು ಜನರಿಗೆ ವಿತರಣೆ ಮಾಡಿದರು.

ಈವರೆಗೆ ಈ ಬ್ಯಾಂಕು ೨೦ ಜನರಿಗೆ ಸಾಲದ ಸೌಲಭ್ಯವನ್ನು ಒದಗಿಸಿದೆ ಎಂದು ಮ್ಯಾನೇಜರ್ ಎ. ರಾಘವಾಚಾರ್ ತಿಳಿಸಿದ್ದಾರೆ.

ನ. ೧೮ರಂದು ಸಮಗ್ರ ಗ್ರಾಮೀಣಾಭಿವೃದ್ಧಿ ವಿಶೇಷ ಜಿಲ್ಲಾಧಿಕಾರಿಗಳು ಮೇಲ್‌ಪಾಲಿಗೆ ಭೇಟಿ ನೀಡಿದ್ದಾಗ ಸದರಿ ಬ್ಯಾಂಕಿನ ಅಧಿಕಾರಿಗಳನ್ನು ಭೇಟಿಮಾಡಿ, ಸದ್ಯದಲ್ಲಿ ಡೈರಿ ಹಾಲನ್ನು ಸಂಗ್ರಹಿಸುವ ಬಗ್ಗೆ ಮತ್ತು ಸಂಚಾರಿ ಪಶುವೈದ್ಯ ಶಾಲೆಯನ್ನು ಆರಂಭಿಸುವ ಬಗ್ಗೆ ಆಶ್ವಾಸನ ಕೊಟ್ಟಿದ್ದಾಗಿ ತಿಳಿದುಬಂದಿದೆ.

## ಇಂಟಾನ್ ಭತ್ತದ ಬೆಳೆ ಕ್ಷೇತ್ರೋತ್ಸವ

ಬೇಗಾರು: ನ. ೨೭ರಂದು ಇಲ್ಲಿ ಶೃಂಗೇರಿ ತಾ॥ ವ್ಯವಸಾಯ ಇಲಾಖೆ ವತಿಯಿಂದ ಇಂಟಾನ್ ಭತ್ತದ ಬೆಳೆಯ ಕ್ಷೇತ್ರೋತ್ಸವವನ್ನು ಆಚರಿಸಲಾಯಿತು. ಈ ಸಮಾರಂಭದ ಅಧ್ಯಕ್ಷತೆಯನ್ನು ಶೃಂಗೇರಿ ತಾ॥ ಅ॥ ಮಂ॥ ಅಧ್ಯಕ್ಷ ...ಸಪ್ಪ ಹೆಗ್ಡೆ ವಹಿಸಿದ್ದರು.

ಮುಖ್ಯ ಅತಿಥಿಯಾಗಿದ್ದ ಚಿಕ್ಕಮಗಳೂರು ಉಪ ವಿಭಾಗಾಧಿಕಾರಿ ಕೆ. ನರಸಿಂಹಯ್ಯ ಬೇಗಾರು ಪಂಚಾಯ್ತಿಯ ಶೇ. ೧೮ರ ಗ್ರಾಂಟ್‌ನಲ್ಲಿ ೨೪ ಹರಿಜನರಿಗೆ ಸ್ಟೀಲ್ ಲೋಟ ಮತ್ತು ತಟ್ಟೆಗಳನ್ನು ವಿತರಣೆ ಮಾಡಿದರು, ಮತ್ತು ಕರ್ನಾಟಕ ಬ್ಯಾಂಕ್ ವತಿಯಿಂದ ೨೫ ಜನರಿಗೆ ಸ.ಗ್ರಾ.ಅ. ಯೋಜಯ ಸಾಲದ ಮಂಜೂರಾತಿ ಪತ್ರವನ್ನು ಸಹ ವಿತರಣೆ ಮಾಡಿದರು. ಬೇಗಾರಿಗೆ ಅಗತ್ಯವಾಗಿರುವ ಬಸ್‌ಸ್ಟಾಪ್‌ನ್ನು ಕೇಳಿದಾಗ ಡಿಸೆಂಬರ್ ೧೫ರ ನಂತರ ರಾ. ಗ್ರಾ.ಉ. ಯೋಜನೆವತಿಯಿಂದ ಮಾಡಿಸಲು ಪ್ರಯತ್ನಿಸುವುದಾಗಿ ಅವರು ತಿಳಿಸಿದರು. ಪಂಚಾಯ್ತಿ ಅಧ್ಯಕ್ಷ ಸಂಜೀವ ಗೌಡ ಅವರು ಸ್ವಾಗತಿಸುತ್ತ, ಪಂಚಾಯ್ತಿಗೆ ಮಂಜೂರಾಗಿರುವ ಜಾಗದಲ್ಲಿ ಕೆಲವರು ತಹಸೀಲ್ದಾರರಿಂದ 'ಮಂಜೂರಾತಿ' ಪಡೆದು ಬಲಾತ್ಕಾರದಿಂದ ಜಾಗವನ್ನು ಆಕ್ರಮಿಸುತ್ತಾರೆ. ಇಂಥ ಆಕ್ರಮಣ ನಡೆಯದಂತೆ ಸೂಕ್ತ ಕ್ರಮ ತೆಗೆದುಕೊಳ್ಳಬೇಕು ಎಂದು ಉಪ ವಿಭಾಗಾಧಿಕಾರಿಗಳನ್ನು ಕೋರಿದರು. ಪಂಚಾಯ್ತಿ ಕಾರ್ಯದರ್ಶಿ ಎನ್.ಸಿ.ರಾಮಪ್ಪ ನಾಯ್ಕ ವಂದಿಸಿದರು.

## ರೈತ ಸಂಘದ ಇನ್ನೊಂದು 'ಮಾದರಿ' ಕಾರ್ಯಾಚರಣೆ.

# ಮುಡುಬ ಸೇತುವೆ ಚರಿತ್ರಾರ್ಹ ಉದ್ಘಾಟನೆ

**ತೀರ್ಥಹಳ್ಳಿ: ಲಂಚ ನಿರ್ಮೂಲನೆಯ ಪ್ರಯತ್ನವಾಗಿ ಲಂಚಕೋರ ನೌಕರರು–ಅಧಿಕಾರಿಗಳನ್ನು ಸಾರ್ವಜನಿಕವಾಗಿ 'ಜನತಾ ನ್ಯಾಯಾಲಯ'ದಲ್ಲಿ ವಿಚಾರಣೆಗೆ ಒಳಪಡಿಸುವ ಅಪೂರ್ವ ಕಾರ್ಯಾಚರಣೆ ಜಾರಿಗೆ ತರುತ್ತಿರುವ ಕರ್ನಾಟಕ ರಾಜ್ಯ ರೈತ ಸಂಘ ಇನ್ನೊಂದು ಮಾದರಿ ಕಾರ್ಯಕ್ರಮ ಪ್ರಾರಂಭಿಸಿದೆ.**

ತೀರ್ಥಹಳ್ಳಿ ತಾ॥ ಮಂಡಗದ್ದೆ ಸಮೀಪ ಮುಡುಬದಲ್ಲಿ ಆರಂಭದ ಅಂದಾಜಿನ ಸುಮಾರು ಮೂರುಪಟ್ಟು (೩ಲಕ್ಷ ರೂ.) ವೆಚ್ಚದಲ್ಲಿ ನಿರ್ಮಾಣವಾಗಿದ್ದ ಸೇತುವೆಯ ಉದ್ಘಾಟನೆಗೆ ಮುಖ್ಯ ಮಂತ್ರಿಗಳನ್ನು ಕರೆಸಲು ಸಾವಿರಾರು ರೂ.ಗಳನ್ನು ಪೋಲು ಮಾಡುವುದನ್ನು ಪ್ರತಿಭಟಿಸಿ ತಾ॥ ರೈತ ಸಂಘ, ಸೇತುವೆ ಸ್ಥಳದಲ್ಲಿ ಕೆಲಸಮಾಡಿದ ವೃದ್ಧ ಕೂಲಿ ಮಲ್ಲಣ್ಣನವರ ಕೈಯಿಂದ ಉದ್ಘಾಟನೆ ನೆರವೇರಿಸಿತು. ಸಮಾರಂಭದಲ್ಲಿ ಅವರಿಗೆ ಜೋಡಿ ಕಂಬಳಿ ಹೊದಿಸಿ ಸನ್ಮಾನಿಸಲಾಯಿತು. ಇಡೀ ಕಾರ್ಯಕ್ರಮಕ್ಕೆ ಆದ ವೆಚ್ಚ ಕೇವಲ ೬೫೦ ರೂ.ಗಳೆಂದು ರೈತ ಸಂಘ ಹೇಳಿದೆ.

(೬ನೇ ಪುಟಕ್ಕೆ)

# ಶೃಂಗೇರಿ: "ಟ್ರೈಸೆಂ" ಹೇಗೆ ಕೆಲಸ ಮಾಡುತ್ತಿದೆ?

(ವಿಶೇಷ ವರದಿ: ಮಾ.ಶೀ.ಗಣಪತಿ)

**[ಶೃಂಗೇರಿ ತಾ|| ನಲ್ಲಿ "ಟ್ರೈಸೆಂ" ಯೋಜನೆಯ ಅನುಷ್ಠಾನದ ಬಗ್ಗೆ ನಮಗೆ ದೂರುಗಳು ಬಂದಿದ್ದವು. ನಮ್ಮ ಗೌರವ ವರದಿಗಾರ ಮಾ.ಶೀ.ಗಣಪತಿ ಈ ದೂರುಗಳ ಬಗ್ಗೆ ಸಂಬಂಧಪಟ್ಟ ಅಧಿಕಾರಿಗಳನ್ನೂ ಹಲವಾರು ಅಭ್ಯರ್ಥಿಗಳನ್ನೂ ಭೇಟಿಮಾಡಿ ವಿಚಾರ ವಿಮರ್ಶೆ ನಡೆಸಿದ ಫಲಿತಾಂಶವನ್ನು ಇಲ್ಲಿ ಕೊಡುತ್ತಿದ್ದೇನೆ. —ಸಂ.]**

ಶೃಂಗೇರಿ: ಈ ತಾಲ್ಲೂಕಿನ ೧೯೮೧-೮೨ನೇ ಸಾಲಿನಲ್ಲಾಗೂ ಹಿಂದಿನ "ಟ್ರೈಸೆಂ" ಸ್ಕೀಮ್‌ನ ಹಂಚಿಕೆ ಮತ್ತು ತರಬೇತಿ ನೀಡುತ್ತಿರುವಲ್ಲಿ ನಡೆದಿರುವ ಅಸಮರ್ಪಕತೆಗಳ ಬಗ್ಗೆ ಓದುಗರು ಮಾಡಿದ್ದ ಆಪಾದನೆಗಳ ಬಗ್ಗೆ ತನಿಖೆನಡೆಸಿದಾಗ ಬೆಳಕಿಗೆ ಬಂದ ಅಂಶಗಳನ್ನು ಇಲ್ಲಿ ಬರೆಯುತ್ತಿದ್ದೇನೆ.

ಈ ಸಾಲಿನಲ್ಲಿ ನಲವತ್ತು ಅಭ್ಯರ್ಥಿಗಳು ವಿವಿಧ ರೀತಿಯ ತರಬೇತಿ ಪಡೆಯುತ್ತಿದ್ದು ಅಭ್ಯರ್ಥಿಗಳ ಆಯ್ಕೆ ಸರಿಯಾಗಿ ನಡೆದಿಲ್ಲ. ನಲವತ್ತು ಅಭ್ಯರ್ಥಿಗಳಲ್ಲಿ ಕನಿಷ್ಠ ೮ ಅಭ್ಯರ್ಥಿಗಳು ಅನುಕೂಲಸ್ಥರು. "ಚಿನ್ನದ ಸರ ಹಾಕಿಕೊಂಡು, ದಿನಕ್ಕೊಂದು ಥರ ಫ್ಯಾಷನ್ ಮಾಡಿಕೊಂಡು ಬರುವವರನ್ನು ಬಡವರೆಂದು ಹೇಳಲು ಹೇಗೆ ಸಾಧ್ಯ?" ಎನ್ನುತ್ತಾರೆ ಕೆಲವರು. ಇನ್ನು ಒಂದೇ ಕುಟುಂಬದ ಇಬ್ಬರನ್ನು ಆಯ್ಕೆ ಮಾಡಿಕೊಂಡಿದ್ದಾರೆಂದು ಓದುಗರೊಬ್ಬರ ಆಪಾದನೆಯೂ ಸತ್ಯ. ಇಂತಹ ಉದಾಹರಣೆಗಳು ಎರಡಿವೆ. ಒಂದು ಕುಟುಂಬದಿಂದ ಅಕ್ಕ–ತಮ್ಮಂದಿರಿಬ್ಬರು ತರಬೇತಿ ಪಡೆಯುತ್ತಿದ್ದರೆ ಇನ್ನೊಂದು ಕುಟುಂಬದಿಂದ ಅಕ್ಕ–ತಂಗಿಯರಿಬ್ಬರು ತರಬೇತಿ ಪಡೆಯುತ್ತಿದ್ದಾರೆ.

೧೯೮೧–೮೨ನೇ ಸಾಲಿನಲ್ಲಿ ಹೊಲಿಗೆ ಯಂತ್ರ ವಿದ್ದವರಿಗೇ ಯಂತ್ರ ಕೊಟ್ಟಿದ್ದಾರೆಂಬ ಆಪಾದನೆಯೂ ನಿಜ. ಶೃಂಗೇರಿಯ ಒಬ್ಬರಿಗೆ ಮನೆಯಲ್ಲಿ ಹೊಲಿಗೆ ಯಂತ್ರವಿದ್ದರೂ ಒತ್ತಾಯಪೂರ್ವಕವಾಗಿ ಮತ್ತೊಂದು ಹೊಲಿಗೆ ಯಂತ್ರ ಕೊಟ್ಟಿರುವುದರಿಂದ ಅವರೀಗ ಒಂದನ್ನು ಮಾರುವ ಯೋಚನೆಯಲ್ಲಿದ್ದಾರೆ. ಬೇರೆ ಯಾರೂ ಮಾರಾಟ ಮಾಡಿರುವ ಬಗ್ಗೆ ಮಾಹಿತಿಗಳು ದೊರೆತಿಲ್ಲ.

ಈ ಸಾಲಿನಲ್ಲಿ ತರಬೇತಿ ಪಡೆಯುತ್ತಿರುವ ಅಭ್ಯರ್ಥಿಗಳಿಗೆ ಇದುವರೆಗೂ ಸ್ಟೈಪೆಂಡ್ ಸಿಕ್ಕಿಲ್ಲ. ಉಳಿದ ಸೌಲಭ್ಯಗಳೂ ಸರಿಯಾಗಿ ದೊರೆಯುತ್ತಿಲ್ಲವೆಂದು ಅಭ್ಯರ್ಥಿಯೊಬ್ಬರು ತಿಳಿಸಿದ್ದಾರೆ. ಇಬ್ಬರಿಗೆ ಒಂದರಂತೆ ಹೊಲಿಗೆ ಕತ್ತರಿ ಕೊಟ್ಟಿದ್ದು ಬಿಟ್ಟರೆ ಮತ್ತೆ ಬಟ್ಟೆ, ಸೂಜಿ, ದಾರ ಇತ್ಯಾದಿ ಯಾವುದೂ ಸಿಕ್ಕಿಲ್ಲ. ಇತ್ತೀಚಿಗೆ ಭೇಟಿನೀಡಿದ್ದ ಪ್ರಾ. ಡೈರೆಕ್ಟರು ಬಟ್ಟೆ ಇತ್ಯಾದಿ ಎಲ್ಲವನ್ನು ಕೊಡಲಾಗುವುದೆಂದು ಹೇಳಿದ್ದರೂ ತಮಗೆ ಯಾವುದೂ ದೊರೆಯುತ್ತಿಲ್ಲವೆಂದು ಅನೇಕ ಅಭ್ಯರ್ಥಿಗಳು ಹೇಳಿದ್ದಾರೆ. ಹಿಂದಿನ ವರ್ಷವೂ ಯಾವ ಸೌಲಭ್ಯವನ್ನೂ ಕೊಟ್ಟಿಲ್ಲ ಎಂದು ಹಿಂದಿನ ವರ್ಷದ ಅಭ್ಯರ್ಥಿಯೊಬ್ಬರು ತಿಳಿಸಿದ್ದಾರೆ. ಇದಕ್ಕಾಗಿ ಒಬ್ಬ ಅಭ್ಯರ್ಥಿಗೆ ೫೦ ರೂ. ಸಂತೆ ಸರ್ಕಾರ ಒದಗಿಸುತ್ತಿದೆ ಎನ್ನಲಾಗಿದೆ.

ಅಭ್ಯರ್ಥಿಗಳಿಗೆ ತಿಂಗಳಿಗೆ ಒಂದು ಉಚಿತ ರಜೆ ಇರುತ್ತದೆಂದು ಪ್ರಾಜೆಕ್ಟ್ ಡೈರೆಕ್ಟರ್ ತಿಳಿಸಿದಾರಂತೆ. ಆದರೆ ಇಲ್ಲಿನ ಸಮಾಜದ–ಕಾರ್ಯದರ್ಶಿನಿಯವರು ರಜೆ ಕೊಡಲು ಸಾಧ್ಯವಿಲ್ಲ ಎನ್ನುತ್ತಾರಂತೆ.

ಇನ್ನು ಹೊಲಿಗೆ ತರಬೇತಿ ನೀಡುವ ಶಿಕ್ಷಕಿಯರ ಕಥೆಯೇ ಬೇರೆ. ಅವರಿಗೆ ಬರುವ ೨೦೦ ರೂ. ಸಂಬಳದಲ್ಲಿ ೭೫ ರೂ. ಖೋತಾ!? ೨೦೦ ರೂಪಾಯಿಗೆ ಸಹಿ ಹಾಕಿಸಿಕೊಂಡು ೧೨೫ ರೂ. ಕೊಡುತ್ತಿದ್ದಾರಂತೆ. ನಾಲ್ಕು ವರ್ಷಗಳಿಂದಲೂ ಇದೇ ರೀತಿ ನಡೆಯುತ್ತಿದೆಯೆಂದು ಗೊತ್ತಾಗಿದೆ. ಈಗ ಮೂವರು ಶಿಕ್ಷಕಿಯರಿದ್ದಾರೆ.

ಈ ಮಧ್ಯೆ "ಯಾವ ಅಭ್ಯರ್ಥಿಗಳೂ ಬಿಡಿಓ ಆಫೀಸಿಗೆ ಯಾವ ಕಾರಣಕ್ಕೂ ಹೋಗಕೂಡದು" ಎಂದು ಕಾರ್ಯದರ್ಶಿನಿ ಸೌಭಾಗ್ಯ ಅಭ್ಯರ್ಥಿಗಳಿಗೆ ಆದೇಶಿಸಿದ್ದಾರೆಂದು ಗೊತ್ತಾಗಿದೆ. ಅವ್ಯವಹಾರ ನಡೆಯುತ್ತಿರುವುದಕ್ಕೆ ಇದೊಂದು ಕನ್ನಡಿ ಎಂದು ಕೆಲವರು ಹೇಳುತ್ತಾರೆ.

ಈ ಸಂಗತಿಗಳ ಬಗ್ಗೆ ಶೃಂಗೇರಿ ಕ್ಷೇತ್ರಾಭಿವೃದ್ಧಿ ಅಧಿಕಾರಿಗಳನ್ನು ವಿಚಾರಿಸಿದಾಗ ಈ ವಿಚಾರಗಳೆಲ್ಲ ಸತ್ಯಕ್ಕೆ ದೂರ ಎಂದು ಪ್ರತಿಪಾದಿಸಿದರು.

ಅಭ್ಯರ್ಥಿಗಳ ಆಯ್ಕೆಯನ್ನು ಜಿಲ್ಲಾ ಗ್ರಾಮೀಣ ಅಭಿವೃದ್ಧಿ ಸಂಸ್ಥೆ(ಡಿಆರ್‌ಡಿಏಸ್) ಸಮೀಕ್ಷೆ ನಡೆಸಿ ಸಿದ್ಧಪಡಿಸಿದ "ಬಡವರ ಪಟ್ಟಿ"ಯ ಆಧಾರದ ಮೇಲೆ ಮಾಡಲಾಗಿದೆ ಎನ್ನುವ ಅವರು, ಸರ್ಕಾರದ ನಿಯಮಗಳ ಪ್ರಕಾರ ಬಡವರನ್ನು ಗುರ್ತಿಸುವಾಗ ಎದುರಾಗುವ ಹಲವು ತೊಡಕುಗಳನ್ನು ವಿವರಿಸಿದರು. ಉದಾಹರಣೆಗೆ ಒಬ್ಬ ಕೂಲಿಯವನ ಸಂಬಳ ಹತ್ತು ರೂ. ಇರಬಹುದು. (ಯಾರಪ್ಪ ಅಷ್ಟು ಸಂಬಳ ಕೊಡುವ ಧರ್ಮಿಷ್ಠರು!) ಅವನು ಸಮೀಕ್ಷೆಯ ಪಟ್ಟಿಯಲ್ಲಿ ಬರಬೇಕಾದರೆ ಸುಳ್ಳು ಹೇಳಬೇಕು. ಇನ್ನೊಬ್ಬ ಸಾಧಾರಣ ಅನುಕೂಲವಂತ ರೈತ ಕುಟುಂಬ ಸರ್ಕಾರಿ ಲೆಕ್ಕದಂತೆ ಪಟ್ಟಿಯಲ್ಲಿ ಸೇರಬಹುದು ಎಂದು ಅವರು ಹೇಳಿದರು.

"ಆದ್ದರಿಂದ ನೀವು ವಿಚಾರ ಮಾಡಬೇಕು. ಸರಿಯಾಗಿ ವಿಮರ್ಶೆ ಮಾಡದೆ ಪತ್ರಿಕೆಯಲ್ಲಿ ಹಾಕಿದರೆ ಏನೂ ಪ್ರಯೋಜನವಾಗುವುದಿಲ್ಲ. ಅದರ ಬದಲು ಪತ್ರಿಕೆಯ ಹೆಸರೇ ಕೆಡುತ್ತದೆ" ಎಂದೂ ಅವರು ಹೇಳಿದರು.

ಆದ್ದರಿಂದ ನಾನು ಆದಷ್ಟೂ ವಿಚಾರ–ವಿಮರ್ಶೆ, ತನಿಖೆ ನಡೆಸಿದೆ. ನಾಲ್ಕೈದು ಹಳ್ಳಿಗಳ ಹತ್ತಕ್ಕೂ ಹೆಚ್ಚು ವ್ಯಕ್ತಿಗಳನ್ನು ಭೇಟಿಮಾಡಿದೆ. ವಿಚಾರ, ತನಿಖೆ ಮಾಡುತ್ತ ಹೋದಷ್ಟೂ ಹೆಚ್ಚೆಚ್ಚು ವಿಷಯಗಳು ಹೊರಬರುತ್ತವೆಯೇ ಹೊರತು, ಆಪಾದನೆಗಳು ಸುಳ್ಳು ಎನ್ನಲು ಆಧಾರಗಳು ಸಿಗಲಿಲ್ಲ.

ಈ ಪರಿಸ್ಥಿತಿ ಇತರ ಕಡೆಗಳಲ್ಲೂ ಇರಬಹುದು. ಇದು ಹೀಗೇ ಮುಂದುವರಿದು "ಟ್ರೈಸೆಂ" ವ್ಯರ್ಥ ಅಥವಾ ದುರುಪಯೋಗ ಆಗಬೇಕೆ ಅಥವಾ ಯಾರಾದರೂ ಅದನ್ನು ಸರಿಪಡಿಸುವವರು ಇದ್ದಾರೆಯೆ?

## ಪ್ರ. ದ. ಕಾಲೇಜಿನ ಇಬ್ಬರು ತುಡುಗು ವಿದ್ಯಾರ್ಥಿಗಳ ಅಮಾನತು

ಕೊಪ್ಪ: ಇಲ್ಲಿನ ಪ್ರ. ದ. ಕಾಲೇಜಿನ ಪ್ರಥಮ ಬಿ.ಎ. ವಿದ್ಯಾರ್ಥಿಗಳಾದ ಅಬ್ದುಲ್ ರಜಾಕ್ ಮತ್ತು ಎಸ್.ಎಂ. ಸತೀಶ ಎಂಬಿಬ್ಬರನ್ನು ಪ್ರಿನ್ಸಿಪಾಲರು ಒಂದು ವಾರ ಕಾಲ ಅಮಾನತಿನಲ್ಲಿಟ್ಟಿದ್ದು, ಅವರುಗಳು ಕ್ಷಮಾಪಣೆ ಕೇಳಿದ ನಂತರ ಪುನಃ ಸೇರಿಸಿಕೊಂಡಿದ್ದಾರೆಂದು ತಿಳಿದುಬಂದಿದೆ.

ಕೆಲವು ದಿನಗಳ ಹಿಂದೆ ತರಗತಿಯ ಪ್ರಾರಂಭಕ್ಕೆ ಮುಂಚೆ ಅಧ್ಯಾಪಕರ ಮೇಜಿನ ಮೇಲೆ ಒಂದು ರಾಶಿ ಮಣ್ಣು ಸುರಿದು ಟೊಮೆಟೋ ಗಿಡ ಹೂತಿಟ್ಟಿದ್ದು, ಪ್ರಿನ್ಸಿಪಾಲರು ಎಷ್ಟು ಕೇಳಿದರೂ ಯಾರೂ ಬಾಯಿಬಿಟ್ಟಿರಲಿಲ್ಲ. ತನಿಖೆಯಿಂದ ಇವರೇ ಆ ಕೆಲಸ ಮಾಡಿದವರೆಂದು ಪತ್ತೆಯಾಯಿತು. ಅವರಿಗೆ ಒಂದು ವಾರ ಕಾಲ ಗಡುವು ಕೊಟ್ಟರೂ ಕ್ಷಮಾಪಣೆ ಕೇಳದಿದ್ದಾಗ ೫. ೧೧ರಿಂದ ಒಂದು ವಾರ ಕಾಲ ಅವರನ್ನು ಅಮಾನತಿನಲ್ಲಿಡುವ ತೀರ್ಮಾನವನ್ನು ಪ್ರಿನ್ಸಿಪಾಲರು ತೆಗೆದುಕೊಂಡರು. ಅಷ್ಟರಲ್ಲೂ ಅವರು ಕ್ಷಮಾಪಣೆ ಕೇಳದಿದ್ದಲ್ಲಿ ಪ್ರಿನ್ಸಿಪಾಲರು ಅವರ ಮೇಲೆ ತೀಕ್ಷ್ಣ ಕ್ರಮ ತೆಗೆದುಕೊಳ್ಳಲು ಉದ್ದೇಶಿಸಿದ್ದರೆಂದು ಹೇಳಲಾಗಿದೆ.

ಈ ಮೊದಲು ಇಬ್ಬರೂ ಬಸ್ಸಿನಲ್ಲಿ ವಿದ್ಯಾರ್ಥಿನಿಯರ ರವಿಕೆಗಳನ್ನು ಬ್ಲೇಡಿನಿಂದ ಹರಿದು, ಸಹ ಪ್ರಯಾಣಿಕರಿಂದ 'ಮಂಗಳಾರತಿ' ಮಾಡಿಸಿಕೊಂಡಿದ್ದರೆಂದು ಹೇಳಲಾಗಿದೆ.

## ಶಿಕ್ಷಣಕ್ಷೇತ್ರದಲ್ಲಿ ಭ್ರಷ್ಟಾಚಾರ ಮಿತಿ ಮೀರಿ ಬೆಳೆಯುತ್ತಿದೆ — ಜಿ.ಆರ್.

ಚಿಕ್ಕಮಗಳೂರು: "ಇಂದಿನ ಶಿಕ್ಷಣ ಪದ್ಧತಿಯು ನಿರುದ್ಯೋಗಿಗಳನ್ನು ಸೃಷ್ಟಿಸುವ ಒಂದು ಸಾಧನವಾಗಿದೆ. ಪದವಿಗಳು ಮಾರುಕಟ್ಟೆಯಲ್ಲಿ ಮಾರಾಟಕ್ಕಿಟ್ಟ ವಸ್ತುಗಳಂತೆ ದೊರೆಯುತ್ತಿವೆ. ವೈದ್ಯಕೀಯ, ಇಂಜಿನಿಯರಿಂಗ್ ಸೀಟುಗಳನ್ನು ಪಡೆಯಲು ಹಣ ಕೊಟ್ಟು ಹೆಚ್ಚು ಅಂಕಗಳನ್ನು ಪಡೆಯುತ್ತಿದ್ದಾರೆ. ಶಿಕ್ಷಣ ಕ್ಷೇತ್ರದಲ್ಲಿ ಭ್ರಷ್ಟಾಚಾರ ಮಿತಿ ಮೀರಿ ಬೆಳೆಯುತ್ತಿದೆ."

—ಹೀಗೆಂದವರು ಖ್ಯಾತ ಕನ್ನಡ ಬರಹಗಾರರೂ, ವಿಧಾನ ಪರಿಷತ್ ಸದಸ್ಯರೂ ಆದ ಬೆಂಗಳೂರಿನ ನ್ಯಾಷನಲ್ ಕಾಲೇಜಿನ ಇಂಗ್ಲಿಷ್ ಉಪನ್ಯಾಸಕ ಡಾ|| ಜಿ.ರಾಮಕೃಷ್ಣ. ಎ.ಐ.ಎಸ್.ಎಫ್. ಜಿಲ್ಲಾ ಮಂಡಳಿ ಏರ್ಪಡಿಸಿದ್ದ ದಿ|| ಭೂಪೇಶಗುಪ್ತ ಸ್ಮಾರಕಾರ್ಥ ಪ್ರಬಂಧಸ್ಪರ್ಧೆಯ ವಿಜೇತರಿಗೆ ಬಹುಮಾನ ನೀಡುವ ಸಮಾರಂಭದಲ್ಲಿ ಅವರು ಮಾತಾಡುತ್ತಿದ್ದರು.

ಅವರು ಮುಂದುವರಿದು, "ಶಿಕ್ಷಣ ಸಂಸ್ಥೆಗಳು ಇಂದು ನೈಜ ವಿಷಯಗಳನ್ನು ಮುಚ್ಚಿಟ್ಟು ನಮ್ಮನ್ನು ತಪ್ಪು ದಾರಿಗೆಳೆಯುತ್ತಿವೆ. ವೈಜ್ಞಾನಿಕ ಮನೋಭಾವನೆಯನ್ನು ಮೂಡಿಸುವ ಪ್ರಯತ್ನಗಳನ್ನು ಬೆಳೆಸಬೇಕು. ತರಬೇತಿಕಾರಿದೆ" ಎಂದ ಅವರು, ವಿದ್ಯಾರ್ಥಿಗಳು ಓದಿ ಪುಸ್ತಕದ ಬದಲಿ ಕಾಣಬೇಕಾಗಿಲ್ಲ ಗದೆ, ಯೋಚನೆಯ, ತಪ್ಪು—ಸರಿಗಳನ್ನು

(ಏನೇ ಪುಟಕ್ಕೆ)

## ಅಲ್ಲವಾದರಲ್ಲವೆನ್ನಿ!

ನರಸಿಂಹರಾಜಪುರದ ಪೋಲೀಸ್ ಠಾಣಾಧಿಕಾರಿಯಾಗಿದ್ದ ಆರ್. ಲಕ್ಷ್ಮಣ್ ಅವರನ್ನು ಕಡೆಗೂ ಅಮಾನತು ಗೊಳಿಸಲಾಗಿದೆ. ಅವರ ಮೇಲೆ ಇಲಾಖಾ ವಿಚಾರಣೆ ಮುಗಿಯುವವರೆಗೂ ಅವರು ಅಮಾನತಿನಲ್ಲಿರಬೇಕು. ಎಷ್ಟು ಕಾಲ ಎಳೆಯಬಹುದು.

ನ.ರಾ.ಪುರ ತಾಲ್ಲೂಕಿನ ಜನಸಾಮಾನ್ಯರ, ಬಡಬಗ್ಗರ ತೀವ್ರ ಪ್ರತಿಭಟನೆಯ ನಡುವೆಯೂ ಮೇಲಧಿಕಾರಿಗಳು ಈ ಕ್ರಮ ತೆಗೆದುಕೊಂಡಿರುವ ಬಗ್ಗೆ ವ್ಯಾಪಕವಾಗಿ ಕಟ್ಟೆ–ಚರ್ಚೆಗಳು, ಫುಟ್‌ಪಾತ್ ಚರ್ಚೆಗಳು, ಕಾಫಿ ಬಾರ್ ಚರ್ಚೆಗಳು ನಡೆಯುತ್ತಿವೆಯಂತೆ. ಲಕ್ಷ್ಮಣರನ್ನು ಸಸ್ಪೆಂಡ್ ಮಾಡುವುದು ಹಾಗಿರಲಿ, ಇಲ್ಲಿಂದ ವರ್ಗಮಾಡುವ ಬಗ್ಗೆ ಕೂಡ, ಡಿಐಜಿ ರೇವಣಸಿದ್ದಯ್ಯನವರಿಗೆ ಸಹ ಬಲವಿರಲಿಲ್ಲವಂತೆ. [ವಾಸ್ತವವಾಗಿ, ಏಳೆಂಟು ಕ್ರಿಮಿನಲ್ ಪ್ರಕರಣಗಳನ್ನು ಎದುರಿಸುತ್ತಿದ್ದಾರೆಂದು ಹೇಳಲಾಗಿರುವ ಡಾ|| ನಾಗರಾಜರ ನಡವಳಿಕೆಯ ಬಗ್ಗೆ ರೇವಣಸಿದ್ದಯ್ಯನವರೇ ಮೈಸೂರಿನಲ್ಲಿದ್ದಾಗ ಅನುಭವ ಪಟ್ಟಿದ್ದರಂತೆ.] ಹೀಗಿರುವಾಗ ಲಕ್ಷ್ಮಣ್‌ಗೆ ಹೇಗೆ ಅಮಾನತಾಯಿತೆಂದು ಎಲ್ಲರಿಗೂ ಆಶ್ಚರ್ಯವಂತೆ. ಈ ಬಗ್ಗೆ ಹಲವಾರು ಮಾತುಗಳು ಕೇಳಿಬರುತ್ತಿವೆಯಂತೆ.

ಮೇಲಂತಸ್ತಿನವರು, 'ಮತ್ಯಾದಸ್ಥರು' ಹಲವು ಸಂದರ್ಭಗಳಲ್ಲಿ—ಮುಖ್ಯವಾಗಿ ಬಡಬಗ್ಗರ ಮೇಲೆ ಸವಾರಿಮಾಡಿದ ಪ್ರಕರಣಗಳಲ್ಲಿ—ಲಕ್ಷ್ಮಣರಿಂದ 'ಆತಿಥ್ಯ' ಪಡೆದಿದ್ದರಂ

(ಏನೇ ಪುಟಕ್ಕೆ)

.೧೯.

# ನಾಲ್ಕು ಸ್ಪಷ್ಟೀಕರಣಗಳು

(೩ನೇ ಪುಟದಿಂದ)

ಕ್ಕೆ ಅವರೇ ಹಾಕಿಕೊಂಡ ಅಡ್ಡಗಲ್ಲು. 'ಕಾವಿ'ಗಳೇ, ಭವಿಷ್ಯದ ದಿನದಲ್ಲಾದರೂ ನಿಮ್ಮ ಬುದ್ಧಿವಂತಿಕೆಯನ್ನು ಅರಿತು ನಿಮ್ಮ ಮತ್ತು ಉಪನ್ಯಾಸಕರ ನಡುವೆ ಸಾಮರಸ್ಯ ಏರ್ಪಡುವಂತೆ ವರ್ತಿಸಿ ಜೀವನದ ಆದರ್ಶ ಮಾರ್ಗದತ್ತ ಸಾಗುವಿರೆಂದು ಅಪೇಕ್ಷಿಸುತ್ತೇವೆ.

—**ಹೊಸ ಉಪನ್ಯಾಸಕರು,**
ಸರ್ಕಾರಿ ಕಿರಿಯ ಕಾಲೇಜು, ಕೊಪ್ಪ.
(ಐದು ಸಹಿ ಇವೆ.)

-(೨)-

ತಾ. ೧೪-೧೧-೮೨ರ 'ಮುಂಜಾವು' ವಾರ ಪತ್ರಿಕೆಯಲ್ಲಿ 'ನಾಟ ವಶ' ಎಂಬ ವರದಿಯಲ್ಲಿ "ಕೆಸಗೋಡಿನ ಬಳಿ ಹೊಟ್ಟಾಲೆ ನಾಟ ವಶವಾಗಿದೆ" ಎಂದು ವರದಿಯಾಗಿದೆ. ಆದರೆ ಕೆಸಗೋಡಿನಲ್ಲಿ ನಮ್ಮ ಒಂದೇ ಮನೆಯಿದ್ದು ನಮ್ಮ ಮನೆ ಬಳಿಯಲ್ಲಿ ಯಾವ ನಾಟ ಅಕ್ರಮ ನಡೆದಿಲ್ಲ. ಇದೇ ಗ್ರಾಮದ ಸ.ನಂ. ೧೮೮ರಲ್ಲಿ ನಾಟ ಹಿಡಿದಿದ್ದಾರೆಂದು ಅರಣ್ಯ ವಲಯಾಧಿಕಾರಿಗಳಿಂದ ತಿಳಿದು ಬಂದಿದೆ. ಅನಗತ್ಯವಾಗಿ ಕೆಸಗೋಡು ಎಂಬ ಹೆಸರು ಬಂದಿರುವುದರಿಂದ ಸಾರ್ವಜನಿಕರಲ್ಲಿ ನಮ್ಮ ಬಗ್ಗೆ ತಪ್ಪು ತಿಳುವಳಿಕೆ ಬರದಿರಲೆಂದು ಈ ರೀತಿಯ ಹೇಳಿಕೆಯನ್ನು ಕೊಡುತ್ತಿದ್ದೇನೆ.

—**ಕೆ.ಚಂದಯ್ಯ ನಾಯ್ಕ,**
ಕೆಸಗೋಡು.

-(೩)-

ಮಾನ್ಯರೆ,

ದಿನಾಂಕ ೪-೧೧-೮೨ರ 'ಗಿರಿವಾರ್ತಾ' ಪತ್ರಿಕೆಯಲ್ಲಿ ಬಂದ "ಮೇಲುಪೆಲ್ರಿ ಮುಖಂಡರ ನಿದ್ದೆ" ಎಂಬ ವರದಿ ನೋಡಿ ಆಶ್ಚರ್ಯವಾಯಿತು.

ಈ ವರದಿಯಲ್ಲಿ ಗ್ರಾಮದ ಏಳ್ಗೆ ಬಗ್ಗೆ ಪಂಚಾಯ್ತಿ ಸದಸ್ಯರ ನಿರ್ಲಕ್ಷ್ಯ, ಸರ್ಕಾರಿ ಸೌಲಭ್ಯಗಳ ಕಬಳಿಕೆ, ಹರಿಜನರ ಜನತಾ ಮನೆಗಳ ಜಖಂ, ತೂತಾದ ಕೊಡ ಮತ್ತು ಕಾಯಿಲೆಯಾದ ಕುರಿಗಳ ವಿತರಣೆ, ರೈತ ಸಂಘದ ಹಣ ದುರುಪಯೋಗ ಮುಂತಾದ ಆರೋಪಗಳಿವೆ. ಆದರೆ ಇವೆಲ್ಲ ಸತ್ಯ ದೂರವಾದ ಮತ್ತು ದುರುದ್ದೇಶದ ಅಪಾದನೆಗಳಾಗಿವೆ. ಈ ರೀತಿ ಸುಳ್ಳು ಹೇಳಿಕೆ ಕೊಡುವುದರಿಂದ ಪ್ರಯೋಜನವಿಲ್ಲ. ಈ ಅಪಾದನೆಗಳನ್ನು ಸಾಬೀತು ಮಾಡಿದಲ್ಲಿ ನಾನು ಸದಸ್ಯತ್ವಕ್ಕೆ ರಾಜೀನಾಮೆ ಕೊಡುತ್ತೇನೆ. ವಿಫಲವಾದರೆ ಈ ಸುಳ್ಳು ಹೇಳಿಕೆ ಕೊಟ್ಟವರು ತಮ್ಮ ತಮ್ಮ ಹುದ್ದೆಗಳಿಗೆ ರಾಜೀನಾಮೆ ಕೊಡಲು ತಯಾರಿದ್ದಾರೆಯೆ?

—**ಡಿ.ವಿ.ಹನುಮಂತ ನಾಯ್ಕ,**
ಪಂಚಾಯ್ತಿ ಸದಸ್ಯ, ಮೇಲುಪೆಲ್ರಿ.

-(೪)-

ಮಾನ್ಯ ಸಂಪಾದಕರೆ,

ತಾ. ೭-೧೧-೮೨ರ ನಿಮ್ಮ ಪತ್ರಿಕೆಯಲ್ಲಿ ಪ್ರಕಟವಾಗಿದ್ದ ನನ್ನ ಪತ್ರದ ಬಗ್ಗೆ ಇಲ್ಲಿನ ಸ್ಟೇಟ್ ಬ್ಯಾಂಕ್ ಬಳಿ ನಡೆದ ಅಹಿತಕರ ಘಟನೆ ಹಾಗೂ ಮ್ಯಾನೇಜರ್‌ರವರ ಪ್ರತಿಕ್ರಿಯೆಗಳನ್ನು ಓದಿದೆ. ನಾನು ಲಘು ಲೇಖನವಾಗಿ ಬರೆದದ್ದು ಬ್ಯಾಂಕ್ ಸಿಬ್ಬಂದಿಗೆ ದೋಷಪೂರಿತವಾಗಿ ಕಂಡು ಬಂದಿದ್ದಕ್ಕೆ ವಿಷಾದಿಸುತ್ತೇನೆ ಮತ್ತು ಕ್ಷಮೆ ಯಾಚಿಸುತ್ತೇನೆ.

ನನ್ನ ಪತ್ರದಲ್ಲಿ ಬ್ಯಾಂಕಿನ ಕಾವಲುಗಾರ ಎಚ್ಚೆತ್ತಿರುವುದಿಲ್ಲ ಎಂಬ ಅರ್ಥದಲ್ಲಿ ನಾನು ಬರೆದದ್ದಲ್ಲ. (ಆತ ನನಗೆ ತುಂಬ ಪರಿಚಿತ.) ಇದೀಗ ತಾನೇ ಬಿಡುಗಡೆಯಾಗಿರುವ 'ಖದೀಮ ಕಳ್ಳರು' ಚಿತ್ರ ಕೆಲವೇ ದಿನ ಮುಂಚೆ ಬಿಡುಗಡೆಯಾಗಿರುತ್ತಿದ್ದರೆ ನನ್ನ ಈ ಬರಹ ಪ್ರಕಟವಾಗುತ್ತಲೇ ಇರಲಿಲ್ಲ.

—**ಮಹಾಬಲ,** ನ.ರಾ.ಪುರ.

ಪುರಸಭಾ ಕಾರ್ಯಾಲಯ,
ಕೊಪ್ಪ, ದಿನಾಂಕ 30-11-82.
ಚಿಕ್ಕಮಗಳೂರು ಜಿಲ್ಲೆ.

## ಸಂಕ್ಷಿಪ್ತ ಟೆಂಡರು ಪ್ರಕಟಣೆ

ನಂ: ಹೆಚ್‌ಸಿ, ಪಿಆರ್. 389/82-83 ದಿನಾಂಕ: 30ನೇ ನವಂಬರ್ 1982.

ಕರ್ನಾಟಕ ಲೋಕೋಪಯೋಗಿ ಇಲಾಖೆಯ ನೊಂದಾಯಿತ ಅಂಗೀಕೃತ ಕಂಟ್ರ್ಯಾಕ್ಟದಾರರಿಂದ ಕೆಳಗೆ ಕೊಡಲಾದ ಕೆಲಸಗಳಿಗಾಗಿ ನಿಗದಿತ ಫಾರಂನಲ್ಲಿ ದ್ವಿಪ್ರತಿಯಲ್ಲಿರುವ ಮೊಹರಾದ ಟೆಂಡರುಗಳನ್ನು ಆಹ್ವಾನಿಸಲಾಗಿದ್ದು ಅವುಗಳನ್ನು ಮುಖ್ಯಾಧಿಕಾರಿಗಳು, ಪುರಸಭಾ ಕಾರ್ಯಾಲಯ, ಕೊಪ್ಪ ಇಲ್ಲಿ ದಿನಾಂಕ 16-12-82ರಂದು ಸಂಜೆ 5 ಗಂಟೆಗಳವರೆಗೆ ಸ್ವೀಕರಿಸಲಾಗುವುದು.

ಸ್ವೀಕರಿಸಿದ ಟೆಂಡರುಗಳನ್ನು ಸಾಧ್ಯವಾದರೆ ಅದೇ ದಿನ ತೆರೆಯಲಾಗುವುದು. ಖಾಲಿ ಟೆಂಡರು ಫಾರಂಗಳನ್ನು ಮುಖ್ಯಾಧಿಕಾರಿಗಳು, ಪುರಸಭಾ ಕಾರ್ಯಾಲಯ, ಕೊಪ್ಪ, ಇಲ್ಲಿ ದಿನಾಂಕ 15-12-82ರ ಸಂಜೆ 5-00 ಗಂಟೆಯವರೆಗೆ ರೂ 2 ಪಾವತಿಸಿ ಪಡೆಯಬಹುದು. ಖಾಲಿ ಟೆಂಡರು ಫಾರಂಗಳಿಗಾಗಿ ಮನವಿಗಳನ್ನು ದಿನಾಂಕ 10-12-82ರಂದು ಅಥವಾ ಅದಕ್ಕೆ ಮುಂಚಿತವಾಗಿ ಸಲ್ಲಿಸಬೇಕು. ಕೆಲಸಗಳ ಇತರ ವಿವರಗಳು ಮತ್ತು ಟೆಂಡರು ಷರತ್ತುಗಳನ್ನು ಪುರಸಭಾ ಕಾರ್ಯಾಲಯ, ಕೊಪ್ಪ ಇಲ್ಲಿ ಪಡೆಯಬಹುದು.

| ಕೆಲಸದ ಹೆಸರು | ಟೆಂಡರಿಗಿಡಲಾದ ಅಂದಾಜು ವೆಚ್ಚ | ಕೆಲಸಮುಗಿಸಲು ಕಾಲಮಿತಿ |
|---|---|---|
| 1) ಪುರಸಭಾ ವ್ಯಾಪ್ತಿಯಲ್ಲಿ ಬಸ್‌ಸ್ಟ್ಯಾಂಡ್ ಆವರಣ, ಸುಭಾಸ್ ರಸ್ತೆ, ವೀರಭದ್ರ ದೇವಸ್ಥಾನದ ರಸ್ತೆ, ತ್ಯಾಗರಾಜ ರಸ್ತೆಗಳಿಗೆ ರೀಚೀಪ್ ಕಾರ್ಪೆಟಿಂಗ್ | 1,28,000-00 | ಒಂದು ತಿಂಗಳು |
| 2) ತಿಲಕ್ ರಸ್ತೆಗೆ ಜೆಲ್ಲಿ ಹಾಕುವುದು | 10,000-00 | ,, |
| 3) ತಿಲಕ್ ರಸ್ತೆ ಮತ್ತು ವೀರಭದ್ರ ದೇವಸ್ಥಾನದ ರಸ್ತೆಯ ಭಾಗಕ್ಕೆ ಚರಂಡಿ ನಿರ್ಮಾಣ | 8,650-00 | ,, |
| | ಒಟ್ಟು ರೂ. 1,46,650-00 | |

(ಸಹಿ) ಆರ್-ಗುಂಡೂರಾವ್,
ಮುಖ್ಯಾಧಿಕಾರಿಗಳು,
ಪುರಸಭಾ ಕಾರ್ಯಾಲಯ,
ಕೊಪ್ಪ. (ಚಿಕ್ಕಮಗಳೂರು ಜಿಲ್ಲೆ)

ಡಿ.೧೬ರಿಂದ ಪ್ಲಾಂಟೇಶನ್ ಕಾರ್ಮಿಕರ

## ಮುಷ್ಕರ

ಚಿಕ್ಕಮಗಳೂರು: ಕರ್ನಾಟಕದ ವಿವಿಧ ಪ್ಲಾಂಟೇಶನ್‌ಗಳ ಕಾರ್ಮಿಕರು ಡಿ.೧೬ರಿಂದ ಮುಷ್ಕರ ಹೂಡಲಿರುವುದಾಗಿ ಸಿಐಟಿಯು ಪ್ರಧಾನ ಕಾರ್ಯದರ್ಶಿ ಸಿ.ನಂಜುಂಡಪ್ಪ ತಿಳಿಸಿದ್ದಾರೆ.

ಅವರು ನೀಡಿರುವ ಪತ್ರಿಕಾ ಹೇಳಿಕೆಯಂತೆ—ಕರ್ನಾಟಕದಲ್ಲಿ ಕಾಫಿ, ಟೀ,ರಬ್ಬರ್, ಏಲಕ್ಕಿ ಮತ್ತು ಮಿಶ್ರ ತೋಟಗಳಲ್ಲಿ ಎರಡೂವರೆ ಲಕ್ಷಕ್ಕಿಂತಲೂ ಹೆಚ್ಚು ಕಾರ್ಮಿಕರು ದುಡಿಯುತ್ತಿದ್ದಾರೆ. ಇವರಿಗೆ ಸಿಕ್ಕುವ ವೇತನ ನೆರೆಯ ತಮಿಳುನಾಡು, ಕೇರಳ ರಾಜ್ಯಗಳಲ್ಲಿರುವ ತೋಟ ಕಾರ್ಮಿಕರಿಗೆ ಸಿಕ್ಕುವ ವೇತನಕ್ಕಿಂತಲೂ ಬಹಳ ಕಡಿಮೆ. ಈ ವ್ಯತ್ಯಾಸ ಒಂದು ದಿನಕ್ಕೆ ಮೂರು ರೂಪಾಯಿಯಿಂದ ನಾಲ್ಕು ರೂಪಾಯಿಯವರೆಗೆ ಇದೆ. ಕರ್ನಾಟಕದ ಪ್ಲಾಂಟೇಷನ್ ಕಾರ್ಮಿಕರ ಕೈಗಾರಿಕಾವಾರು ಒಪ್ಪಂದವು ೩೧-೧೨-೧೯೮೧ಕ್ಕೆ ಮುಗಿದಿದ್ದು ೧-೧-೮೨ರಿಂದ ವೇತನ ಹೆಚ್ಚಾಗಬೇಕಾಗಿದೆ. ಮೂರು ದ್ವಿಪಕ್ಷೀಯ ಸಭೆಗಳು ವೇತನ ಹೆಚ್ಚಳವನ್ನು ಚರ್ಚಿಸಿವೆ. ಪ್ಲಾಂಟೇಷನ್ ಕಾರ್ಮಿಕರು ೨೬-೧೧-೮೨ರಂದು ಒಂದು ದಿನದ ಯಶಸ್ವೀ ಮುಷ್ಕರವನ್ನು ನಡೆಸಿದರು.

ವೇತನ ಹೆಚ್ಚಳ, ತುಟ್ಟಿಭತ್ಯೆಯನ್ನು ಹೊಸದಾಗಿ ಕೊಡುವುದು ಮತ್ತು ಇತರ ಬೇಡಿಕೆಗಳನ್ನು ಚರ್ಚಿಸಲು ಬೆಂಗಳೂರಿನಲ್ಲಿ ೨೭-೧೧-೮೨ರಂದು ಸೇರಿದ್ದ ದ್ವಿಪಕ್ಷೀಯ ಸಭೆಯಲ್ಲಿ ಆಡಳಿತ ಮಂಡಳಿಯ ಪ್ರತಿನಿಧಿಗಳ ಹಠಮಾರಿತನ, ಅನುಚಿತ ಮತ್ತು ಜಿಪುಣ ಮನೋಭಾವಗಳಿಂದಾಗಿ ಮಾತುಕತೆ ವಿಫಲವಾಯಿತು. ಇದರಿಂದಾಗಿ ಮುಷ್ಕರ ಮಾಡುವುದಲ್ಲದೆ ಪ್ಲಾಂಟೇಷನ್ ಕಾರ್ಮಿಕರಿಗೆ ಬೇರೆ ದಾರಿ ಇಲ್ಲವಾಗಿದೆ.

ಐ. ಎನ್ .ಟಿ. ಯು. ಸಿ., ಸಿ. ಐ. ಟಿ. ಯು., ಎ.ಐ.ಟಿ.ಯು.ಸಿ.ಗೆ ಸೇರಿರುವ, ಸ್ವತಂತ್ರವಾದ ಮತ್ತು ಎ.ಐ.ಎ.ಡಿ.ಎಂ.ಕೆ. ನೇತೃತ್ವದಲ್ಲಿರುವ ಪ್ಲಾಂಟೇಷನ್ ಕಾರ್ಮಿಕ ಸಂಘಗಳ ಜಂಟಿ ಕ್ರಿಯಾ ಸಮಿತಿಯು ೧೬-೧೨-೧೯೮೨ರಿಂದ ಮುಷ್ಕರವನ್ನು ಪ್ರಾರಂಭಿಸಲು ತೀರ್ಮಾನಿಸಿದೆ. ಈ ಮುಷ್ಕರಕ್ಕೆ ಸಾರ್ವಜನಿಕರು ಬೆಂಬಲ ಕೊಡಬೇಕೆಂದು ಜಂಟಿ ಕ್ರಿಯಾ ಸಮಿತಿಯ ಪರವಾಗಿ ಪ್ರಧಾನ ಕಾರ್ಯದರ್ಶಿ ಸಿ. ಡಿನಂಜುಡಪ್ಪ ಮನವಿ ಮಾಡಿದ್ದಾರೆ.

## "ಬಡವ" — ಜಿಲ್ಲೆಯಲ್ಲಿ ಇನ್ನೊಂದು ಪತ್ರಿಕೆ

ಚಿಕ್ಕಮಗಳೂರು: ಖ್ಯಾತ ಯುವ ಪತ್ರಕರ್ತ ಬಿ.ಎಸ್.ಶೇಷಾದ್ರಿಯವರ ಸಂಪಾದಕತ್ವದಲ್ಲಿ ಇಲ್ಲಿಂದ 'ಬಡವ' ಎಂಬ ವಾರಪತ್ರಿಕೆಯೊಂದು ಡಿ. ೧೫ರಿಂದ ಪ್ರಕಟಣೆ ಪ್ರಾರಂಭಿಸಲಿದೆ (ಸದ್ಯಕ್ಕೆ ಖಾಸಗಿ ಪ್ರಸಾರದಲ್ಲಿ.)

ದೇಶದ ಅತ್ಯಂತ ಬಡವರ, ದಲಿತರ, ಶ್ರಮ ಜೀವಿಗಳ ಹಿತ ರಕ್ಷಣೆಯೇ ಪತ್ರಿಕೆಯ ಮುಖ್ಯ ಉದ್ದೇಶವೆಂದು ಪ್ರಕಾಶಕ ಬಿ.ಕೆ.ಸುಂದರೇಶ್ ತಿಳಿಸಿದ್ದಾರೆ.